

HIS HIGHNESS
SIR SRI KRISHNARAJA WADIYAR BAHADUR,
G. C. S. I., G. B. E.
MAHARAJA OF MYSORE.

DEDICATED BY GRACIOUS PERMISSION

TO

HIS HIGHNESS

SIR SRI KRISHNARAJA WADEYAR

BAHADUR,

G. C. S. I., G. B. E.,

MAHARAJA OF MYSORE

ಈ ಪುಸ್ತಕವು

ಮೈಸೂರು ಸಂಸ್ಥಾನದ ಮಹಾಪ್ರಭುಗಳಾದ

ಸರ್ ಶ್ರೀ ಕೃಷ್ಣರಾಜ ಒಡೆಯರ್ ಬಹದ್ದೂರ್

ಜಿ. ಸಿ. ಎಸ್. ಐ., ಜಿ. ಬಿ. ಇ.,

ಮಹಾಸ್ವಾಮಿಯವರ ಸನ್ನಿಧಿಯಲ್ಲಿ

ಅಪ್ಪಣೆಯನ್ನು ಪಡೆದು





ಪಟ್ಟಿದೆ

# ಪ್ರಥಮ ಮುದ್ರಣದ ಉಪೋದ್ಘಾತ

---

ಪ್ರಪಂಚದ ನವನಾಗರಕತೆಯ ಅಭಿವೃದ್ಧಿಗೆ ಆವಶ್ಯಕವಾದ ನಡೆನುಡಿಗಳನ್ನು ಕ್ರಮಪಡಿಸಿಕೊಂಡು ಅಭಿವೃದ್ಧಿಗೆ ಬಂದು, ಅಗ್ರಗಣ್ಯರೆನಿಸಿದ ಪ್ರಜಾಶ್ರೇಷ್ಠರ ಮತ್ತು ಕವಿಪುಂಗವರ ಹಿತೋಕ್ತಿಗಳನ್ನು ಸಂಗ್ರಹಿಸಿ, ವಾಚಕರ ಮನಸ್ಸನ್ನು ಆಕರ್ಷಿಸುವಂತೆ, ಈ ಚಿಕ್ಕ ಪುಸ್ತಕವನ್ನು ಬರೆಯಲಾಗಿದೆ.

ಮನುಷ್ಯನ ಅಭಿವೃದ್ಧಿ ಸಾಧನೆಗೆ ಯೋಗ್ಯವಾದ ಸುಗುಣಗಳು ಹದಿನಾಲ್ಕು ರತ್ನಗಳಂತೆ ಈ "ಅಭಿವೃದ್ಧಿರತ್ನಾಕರ" ದಲ್ಲಿ ಅಡಕವಾಗಿರುವುವು. ಈ ನೀತಿರತ್ನಗಳು ಸರ್ವರಿಗೂ ಮಾರ್ಗದರ್ಶಕವಾಗುವಂತೆ ಭಗವಂತನು ಅನುಗ್ರಹಿಸಲೆಂದು ಪ್ರಾರ್ಥನೆ.

ಈ ಪುಸ್ತಕವನ್ನು ಹೊರಡಿಸುವುದರಲ್ಲಿ ಸಹಾಯಮಾಡಿದ ಮ|| ರಾ|| ಡಿ. ಆರ್. ರಾಮಯ್ಯನವರಿಗೂ, ಭಾಷಾಶೈಲಿಯನ್ನು ಸರಿಪಡಿಸಿದ ಮ|| ರಾ|| ಎಸ್. ಜಿ. ಗೋವಿಂದರಾಜಯ್ಯಂಗಾರ್ಯರಿಗೂ, ಇದರ ಲೇಖನಗಳನ್ನು ಒಕ್ಕಲಿಗರ ಪತ್ರಿಕೆಯಲ್ಲಿ ಮೊದಲು ಪ್ರಚುರಪಡಿಸಿದ ಆ ಪತ್ರಿಕಾಸಂಪಾದಕರಿಗೂ, ಹೃದಯಪೂರ್ವಕವಾದ ವಂದನೆಗಳನ್ನು ಅರ್ಪಿಸುತ್ತೇನೆ.

ಸಿದ್ಧರಾಂ ವಿಲಾಸ,
ಶಂಕರಪುರ, ಬೆಂಗಳೂರು ಸಿಟಿ.

ಎಸ್. ಕೆ. ನರಸಿಂಹಯ್ಯ.

# ದ್ವಿತೀಯ ಮುದ್ರಣದ ಪೀಠಿಕೆ

ಮೈಸೂರು ಮತ್ತು ಬೊಂಬಾಯಿ ಸರ್ಕಾರದ ವಿದ್ಯಾಭ್ಯಾಸದ ಇಲಾಖೆಯವರು ಈ ಪುಸ್ತಕವನ್ನು ಪಾಠಶಾಲೆಗಳಲ್ಲಿ ಪಠ್ಯಪುಸ್ತಕವನ್ನಾಗಿ ನೇಮಿಸಿಕೊಂಡು ಪ್ರೋತ್ಸಾಹ ಕೊಟ್ಟುದರ ಫಲವಾಗಿ ಮೊದಲನೇ ಮುದ್ರಣದ ಪ್ರತಿಗಳೆಲ್ಲವೂ ಮುಗಿದುಹೋದವು. ಅಲ್ಲಲ್ಲಿ ಕಂಡುಬಂದ ಕೆಲವು ನ್ಯೂನತೆಗಳನ್ನು ಸರಿಪಡಿಸಿ ಈ ದ್ವಿತೀಯ ಮುದ್ರಣವನ್ನು ಪ್ರಕಟಿಸಲಾಗಿದೆ. ಪಾಠಕರು ಮೊದಲಿನಂತೆ ಪ್ರೋತ್ಸಾಹ ಕೊಡಬೇಕಾಗಿ ಪ್ರಾರ್ಥನೆ.

ತಾ॥ 1—6—1927.<br>
ಶಿದ್ಧರಾಂ ವಿಲಾಸ, ಶಂಕರಪುರ,<br>
ಬೆಂಗಳೂರು ಸಿಟಿ.

ಎಸ್. ಕೆ. ನರಸಿಂಹಯ್ಯ.

# ವಿಷಯಸೂಚನೆ.

# ಅಭಿವೃದ್ಧಿರತ್ನಾಕರ

---

## ಪ್ರಕರಣ ೧

### ಮುನ್ನುಡಿ

**ನೀತಿಯಲಿ ನಡೆಯಬಲ್ಲೊಡೆ ।**
**ಮಾತಂ ಪರಹಿತವ ನುಡಿಯಬಲ್ಲೊಡೆ ಸುಜನ ॥**
**ಪ್ರೀತಿಯನು ಮಾಡಬಲ್ಲೊಡೆ ।**
**ಯಾತಂಗರಿದುಂಟೆ ಸುಗುಣರತ್ನಕರಂಡಾ ॥**

ಎಂದು ಒಬ್ಬ ಪ್ರಖ್ಯಾತ ಕವಿಯು ಹೇಳಿರುವನು. ಯಾರು ಯಾವಾಗಲೂ ನೀತಿಮಾರ್ಗದಲ್ಲಿ ನಡೆಯುವರೋ, ಯಾರು ಸರ್ವ ಕಾಲದಲ್ಲಿಯೂ ಪರರಿಗೆ ಹಿತವನ್ನು ಬಯಸುವರೋ, ಯಾರು ಎಡೆಬಿಡದೆ ಸತ್ಪುರುಷರನ್ನು ತಮ್ಮ ಸೇವೆಯಿಂದ ಸಂತೋಷಗೊಳಿಸುವರೋ ಅಂತಹ ಜನರಿಗೆ ಸಮಾನರು ಈ ಜಗತ್ತಿನಲ್ಲಿ ಯಾರೂ ಇರುವುದಿಲ್ಲ.

"ಪ್ರಸ್ತಾವಸದೃಶಂ ವಾಕ್ಯಂ ಸ್ವಭಾವಸದೃಶಾಂ ಕ್ರಿಯಾಂ । ಆತ್ಮಶಕ್ತಿ ಸಮಂ ಕೋಪಂ ಯೋ ಜಾನಾತಿ ಸಪಂಡಿತಃ ॥" ಎಂದರೆ ಪ್ರಕೃತೋಚಿತವಾದ ಮಾತನ್ನೂ, ತಮ್ಮ ಸ್ವಭಾವಯೋಗ್ಯವಾದ ಕಾರ್ಯವನ್ನೂ ಶಕ್ತಿಗೆ ಅನುಗುಣವಾದ ಕೋಪವನ್ನೂ ಮಾಡುವವರು ಸಜ್ಜನರೆನಿಸುವರು, ಎಂಬುದಾಗಿ ನೀತಿಶಾಸ್ತ್ರವು ಸಾರುತ್ತದೆ. ಇದೇ ನೀತಿಮಾರ್ಗಕ್ಕೆ ಮೊದಲನೆಯ ಮೆಟ್ಟಲು ; ಆದರೆ ನೀತಿಯ ತತ್ವಗಳನ್ನು ಪರಿಶೀಲಿಸಿ ನಡೆಯುವವರು ಕೆಲವರು ; ದುರಭಿಪ್ರಾಯಗಳ ಕಡೆಗೆ

ಮನಸ್ಸನ್ನು ತಿರುಗಿಸಿ ಹೆಮ್ಮೆಯಿಂದ ನಡೆಯುವವರು ಹಲವರು ; ಹೀಗೆ ಮಾನವರು ದಾರಿದಪ್ಪಿ ಹೀನಸ್ಥಿತಿಗೆ ಬರುತ್ತ, ಕಾಲಕ್ರಮದಲ್ಲಿ ಅಪಖ್ಯಾತಿಯನ್ನು ಪಡೆಯುವರು.

ಎಂದಾದರೂ ಒಂದು ದಿನ ನಾನೂ ಉನ್ನತಸ್ಥಿತಿಗೆ ಬರಬೇಕೆಂಬ ಆಶೆಯು ಸಾಮಾನ್ಯವಾಗಿ ಎಲ್ಲರನ್ನೂ ಬಾಧಿಸುತ್ತದೆ. ಸ್ವರ್ಗಸುಖವು ಭೂಲೋಕದಲ್ಲಿಯೇ ಆಗಬೇಕೆಂದು ಬಯಸುವ ಇವರ ಆಶೆಯು ಸ್ತೋತ್ರಾರ್ಹವಾದುದು. ಆದರೆ ಸರಿಯಾದ ದಾರಿಯನ್ನು ಹಿಡಿಯದೆ, ಮನಸ್ಸಿಗೆ ಬಂದಂತೆ ಹೋಗುವ ಇವರ ನಡವಳಿಕೆಯು ನಿಂದಾಸ್ಪದವಾದುದು. ಈ ಮಾಯಾ ಪ್ರಪಂಚದಲ್ಲಿ ದಾರಿ ತಪ್ಪಿದರೆ ಮನುಷ್ಯನು ಅಧೋಗತಿಗೆ ಇಳಿಯುವನು. "ನಾನು ಯಾರು ? ನನ್ನ ಕರ್ತವ್ಯವೇನು ?" ಎಂಬ ಜ್ಞಾನೋದಯವು ಆತನಿಗೆ ಉಂಟಾಗುವುದಿಲ್ಲ. ಒಂದು ವೇಳೆ ಉಂಟಾದರೂ, ಆ ವೇಳೆಗೆ ಆತನು ದಾರಿದಪ್ಪಿ ಬಹಳ ದೂರ ಹೋಗಿರುವನಾದ ಕಾರಣ, ತಾನಿರುವ ದುರವಸ್ಥೆಯೇ ತನಗೆ ಪ್ರಿಯವಾಗಿ ಕಂಡುಬರುವುದು. ತತ್ವಾರ್ಥಗಳು ಆತನನ್ನು ಸರಿಯಾದ ದಾರಿಗೆ ತಂದುಬಿಡಲಾರವು. ಹೀಗೆ ಎಲ್ಲಿ ನೋಡಿದರೂ ಸುಖ ಸಂಪತ್ತುಗಳಿಗೆ ಆಶ್ರಯಭೂತವಾದ ಈ ವಸುಧೆಯಲ್ಲಿ ಮನುಷ್ಯನು ವಿಚಾರಹೀನನಾಗಿ ಕೆಟ್ಟುಹೋಗುವನು. ಆತನು ಗುಣವಂತನಾದರೂ ನೀತಿವಿಹೀನರ ಆಶ್ರಯದಿಂದ ತನ್ನ ಸುತ್ತಮುತ್ತಲೂ ಇರುವ ಜನರ ವ್ಯವಹಾರಗಳನ್ನು ನೋಡಿ, ಕ್ಷಣಿಕ ಸುಖಕ್ಕಾಗಿ ಮನಸೋತು, ತನ್ನ ಸಹಜವಾದ ಶೀಲಸ್ವಭಾವಗಳನ್ನು ಕ್ಷಣಮಾತ್ರದಲ್ಲಿ ಕಳೆದುಕೊಳ್ಳುವನು.

ಆದರೆ ಮನುಷ್ಯನು ಪ್ರಪಂಚದಲ್ಲಿ ಬಾಳುವುದೇ ಅಸಾಧ್ಯವೆಂದು ತಿಳಿಯಬಾರದು. ಭೂಮಿಗೆ ಹೊರೆಯಾಗಿ ಕೇವಲ

ಸ್ವಾರ್ಥತೆಯಿಂದ ಬಾಳುವವನ ಗೋಳು ಹಾಗಿರಲಿ. ಉನ್ನತ ಸ್ಥಿತಿಗೆ ಬರಬೇಕೆಂದು ಬಯಸುವ ಒಬ್ಬೊಬ್ಬನೂ ಸಜ್ಜನರ ಸಹವಾಸದಲ್ಲಿರಬೇಕು. ಹಿಂದೆ ಬಾಳಿದ, ಈಗ ಬಾಳುತ್ತಿರುವ, ಮಹನೀಯರು ಪಾಪಮೋಹಿತರಾಗದೆ, ಯಾವ ಬಲ್ಮೆಯಿಂದ ಉನ್ನತ ಸ್ಥಿತಿಗೆ ಬಂದರೆಂಬುದನ್ನು ತಿಳಿದು, ಆ ಬಲ್ಮೆಯನ್ನು ಅಥವಾ ಅದರ ಅಂಶವನ್ನು ತಾನೂ ಕೊಂಚಮಟ್ಟಿಗೆ ಪಡೆಯಲೆತ್ನಿಸಬೇಕು. ಮನುಷ್ಯನು ಪ್ರಯತ್ನದ ಬಲದಿಂದ ತಾನೇ ಒಬ್ಬ ಮಹಾತ್ಮನಾಗಬಹುದು; ಜಗದ್ವಿಖ್ಯಾತನೂ ಆಗಬಹುದು.

ಮಾನವನು, ಪ್ರಪಂಚದ ಕಪಟನಾಟಕದಲ್ಲಿ ತಾನೂ ಕುಣಿಯಲು ಪ್ರಯತ್ನಿಸುವುದಕ್ಕೆ ಮೊದಲು, ತನ್ನ ಶೀಲಸ್ವಭಾವಗಳನ್ನು ತಕ್ಕಮಟ್ಟಿಗೆ ತಿದ್ದಿ ಸರಿಪಡಿಸಿಕೊಳ್ಳಬೇಕು. ಆದರೆ, "ಬಾಲ್ಯವು ಯೌವನದ ತಂದೆ" ಎಂದು ಹೇಳಿರುವುದರಿಂದ, ಮನುಷ್ಯನು ಬಾಲ್ಯದಲ್ಲಿ ತನ್ನ ಬುದ್ಧಿಯನ್ನು ಕ್ರಮವಾದ ರೀತಿಯಲ್ಲಿ ತಿದ್ದಿ ಸರಿಪಡಿಸಿಕೊಂಡರೆ, ಯೌವನದಲ್ಲಿ ಅದು ಪ್ರವರ್ಧಮಾನಕ್ಕೆ ಬಂದು, ಆತನು ಉನ್ನತಾವಸ್ಥೆಯನ್ನು ಪಡೆಯುವನು. ಆದುದರಿಂದ, ಬಾಲ್ಯದಲ್ಲಿ ನೀತಿಬೋಧಕವಾದ ಗ್ರಂಥಗಳನ್ನು ಬರೆದು, ಓದಿ ಅಥವಾ ಕೇಳಿದವರು ಹಾನಿಕರವಾದ ಪಾಪಕಾರ್ಯಗಳನ್ನೆಸಗಲು ಹೆದರುವರು. ಮಹಾತ್ಮರ ಚರಿತ್ರೆಗಳನ್ನು ಓದುವುದರಿಂದ, ತಮ್ಮಲ್ಲಿರುವ ಕೆಟ್ಟ ನಡತೆಗಳನ್ನು ತಕ್ಕಮಟ್ಟಿಗೆ ಸರಿಪಡಿಸಿಕೊಳ್ಳಬಹುದು.

ಒಬ್ಬೊಬ್ಬ ಮಹಾತ್ಮನೂ ಒಂದೊಂದು ಗುಣಕ್ಕೆ ಆದರ್ಶಪ್ರಾಯನಾಗಿರುವನು. ಆದರೆ ಯಾವ ಒಂದು ಗುಣವನ್ನೇ ಆಗಲಿ ಬಲಪಡಿಸಿಕೊಳ್ಳುವುದರಿಂದ, ಮನುಷ್ಯನಿಗೆ ಸುಖಸಂ

ವಸ್ತುಗಳು ದೊರಕಲಾರವು. ಆದಕಾರಣ, ಅನೇಕ ಮಹನೀಯರ ಚರಿತ್ರೆಗಳನ್ನು ಓದಬೇಕಾದುದು ಅತ್ಯಾವಶ್ಯಕವಾಗಿದೆ. ಅಂತಹ ಮಹನೀಯರ ಚರಿತ್ರೆಗಳನ್ನು ಓದಿ, ಒಬ್ಬೊಬ್ಬರಲ್ಲಿಯೂ ತೋರಿಬರುವ ಉತ್ತಮಗುಣಗಳನ್ನೆಲ್ಲಾ ಸಂಗ್ರಹಿಸಿ, ಈ ಚಿಕ್ಕ ಪುಸ್ತಕವನ್ನು ಬರೆಯಲಾಗಿದೆ. ವಾಚಕರು ಇದನ್ನು ಆಮೂಲಾಗ್ರವಾಗಿ ಓದಿ, ಇಹಪರಸುಖಗಳಿಗೆ ಕಾರಣವಾದೀ ಸುಗುಣಗಳನ್ನು ತಮ್ಮ ದೈನಂದಿನದ ನಡವಳಿಕೆಯಲ್ಲಿ ಬಳಕೆಗೆ ತಂದುಕೊಂಡರೆ, ನೀತಿಯೆಂಬ ವನವಿಹಾರದ ಸೊಬಗು ಗೊತ್ತಾಗುತ್ತದೆ.

ನೀತಿಯೇ ನಂದನವನ; ನೀತಿವಂತನೇ ವನವಿಹಾರಿ; ಸರ್ವಋತುಗಳಲ್ಲಿಯೂ ಫಲಪುಷ್ಪಗಳನ್ನೀವ ತರುಗುಲ್ಮಲತಾದಿಗಳಿಂದ ತುಂಬಿರುವೀ ಉದ್ಯಾನವನದಲ್ಲಿ ವನವಿಹಾರಿಯು ಆನಂದಭರಿತನಾಗಿ ಮೆರೆಯುವನು. ಚಿಂತೆಯು ಚಿತೆಯನ್ನು ಸೇರುವುದು. ಆಗ ಮನುಷ್ಯನಿಗೆ ಜ್ಞಾನೋದಯವಾಗುವುದು. ನೀತಿಯೆಂಬ ನಂದನವನದಲ್ಲಿ ವಾಸಿಸುವವನು ಪಾಪಭೀತನಾಗಿಯೂ ಕರ್ತವ್ಯಪರಾಯಣನಾಗಿಯೂ ಬಾಳುವನು. ಒಂದೊಂದು ಫಲವೂ, ಒಂದೊಂದು ಪುಷ್ಪವೂ, ಅಮೂಲ್ಯವಾದೊಂದೊಂದು ರತ್ನಕ್ಕೆ ಸಮಾನವಾದುದು. ಈ ನಂದನವನವು ಇಂತಹ ರತ್ನಗಳಿಗೆ ಆಕರವಾಗಿದೆ. ಈ ರತ್ನಗಳ ನೋಟದಿಂದ ಆನಂದವನ್ನು ಪಡೆಯುವ ಮಾನವನು ಇವುಗಳನ್ನು ವಿಶೇಷ ಶ್ರಮದಿಂದ ಶೇಖರಿಸುವುದಾದರೆ, ತನ್ನ ದುಃಖವನ್ನು ಮರೆತು ಅಭಿವೃದ್ಧಿಗೆ ಬರುವನೆಂಬುದು ಅತಿಶಯೋಕ್ತಿಯಲ್ಲ. ಆದರೆ ಪುರುಷ ಪ್ರಯತ್ನವನ್ನು ಮಾಡದೆ ದೈವಸಹಾಯವನ್ನೇ ಕೋರುವುದಾಗಲಿ, ಸ್ವಕಾರ್ಯವಲ್ಲಿ ಮಾತ್ರ ವಿಶೇಷ

ವಾದ ಕಾಂಕ್ಷೆಯನ್ನಿಟ್ಟಿರುವುದಾಗಲಿ ಮನುಷ್ಯನ ಅಭಿವೃದ್ಧಿಗೆ ಮಾರ್ಗವಲ್ಲ. ತನ್ನ ಸ್ವಾಭಾವಿಕ ಸುಗುಣಗಳನ್ನು ವೃದ್ಧಿಗೊಳಿಸಿಕೊಂಡು, ಮಹನೀಯರ ಮಾರ್ಗವನ್ನು ಹಿಡಿದು ನಡೆದರೆ, ಆಗ ಮನುಷ್ಯನ ಮನದ ಬಯಕೆಯು ಈಡೇರುವುದು.

ನೀತಿಗಳು ಸಕಲಶಾಸ್ತ್ರ ।
ಖ್ಯಾತಿಗಳರಿವುಳ್ಳ ಸಕಲ ಬುಧಜನಚಿತ್ತ ॥
ಪ್ರೀತಿಗಳು ದುಃಖತಿಮಿರ ।
ಜ್ಯೋತಿಗಳೆಂದೆನಿಸುತಿಹುವು ಚೂಡಾರತ್ನಾ ॥

---

# ಪ್ರಕರಣ ೨

## ಐಶ್ವರ್ಯ-ಪರೋಪಕಾರ

ಶ್ಲೋ ॥ ಶ್ಲೋಕಾರ್ಧೇನ ಪ್ರವಕ್ಷ್ಯಾಮಿ ಯದುಕ್ತಂ ಗ್ರಂಥಕೋಟಿಭಿಃ ।
ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀಡನಂ ॥

ತನ್ನವರೆನ್ನವರೆನ್ನದೆ ।
ಸನ್ನುತಮತಿಯಾಗಿ ಸಕಲಜೀವಂಗಳುಮಂ ॥
ತನ್ನಂ ರಕ್ಷಿಸುವಂತಿರೆ ।
ಬಿನ್ನಣವೇನರಿದು ರಕ್ಷಿಪುದು ಸತ್ಪುರುಷಂ ।

ಮನುಷ್ಯನು ದಿನೇ ದಿನೇ ಮುಂದುವರಿವಂತೆ ಮಾಡುವ ಮುಖ್ಯವಾದ ಕೆಲವು ಗುಣಗಳಿವೆ. ಅವುಗಳಲ್ಲಿ ಪರೋಪಕಾರವು ಅತಿ ಮುಖ್ಯವಾದುದು. ಪ್ರಪಂಚದಲ್ಲಿ ಜನರು ದ್ರವ್ಯಾರ್ಜನೆಗೋಸ್ಕರ ಹಗಲೂ ಇರುಳೂ ದುಡಿಯುವರು. ಹೆಚ್ಚಾದ ಜಿಪುಣತನದಿಂದ ಅಷ್ಟಿಷ್ಟು ಕೂಡಿಟ್ಟು, ಅವರು ಕಡೆಗೆ ಪರರ ಅಧೀನ ಮಾಡುವರು. ವಿಚಾರಿಸಿ ನೋಡಿದರೆ, ಮನುಷ್ಯನು ಪರೋಪಕಾರಕ್ಕಾಗಿ ಲಕ್ಷೋಪಲಕ್ಷ ದ್ರವ್ಯವನ್ನು ಗಳಿಸಬೇಕಾ

ದುದಿಲ್ಲ. ಪರೋಪಕಾರವನ್ನು ನಾನಾ ರೀತಿಯಲ್ಲಿ ಮಾಡಬಹುದು. ದ್ರವ್ಯವಿದ್ದರೂ ಪರೋಪಕಾರಕ್ಕಾಗಿ ವಿನಿಯೋಗಿಸದಿರುವುದು ದೊಡ್ಡ ತಪ್ಪು; ಬಡಬಗ್ಗರನ್ನು ಸುಲಿದು ಸಂಪಾದಿಸಿ ಧನಮದದಿಂದ, ನೆರೆಹೊರೆಯವರನ್ನೂ, ಬಂಧುಬಳಗದವರನ್ನೂ ಹಿಂಸಿಸಿ ಬಾಳಿದ ಧನಿಕರ ಹೆಸರೇ ಅಳಿಸಿಹೋಗಿದೆ. ಇಂತಹ ಮಹಾನುಭಾವರನ್ನು ನಡುಹಗಲಲ್ಲಿ ನೆನೆವುದೂ ಪಾಪಕರವೆಂದು ಸಜ್ಜನರು ಹೇಳುವರು. ಐಶ್ವರ್ಯವು ಬಿರುಗಾಳಿಗೊಡ್ಡಿದ ದೀಪದಂತೆ ಕ್ಷಣಿಕವಾದುದು. ಸುಗುಣವೊಂದು ಮಾತ್ರ ಸ್ಥಿರವಾಗಿ ನಿಲ್ಲುವುದು. ಹೋಮರ್, ಪ್ಲೇಟೋ, ಸಾಕ್ರೆಟೀಸ್, ಷೇಕ್ಸ್‌ಪಿಯರ್, ಕಾಳಿದಾಸ, ಮೊದಲಾದ ಪ್ರಖ್ಯಾತ ಗ್ರಂಥಕರ್ತರೂ, ಏಬ್ರಹಾಮ್ ಲಿಂಕನ್, ದಾದಾಭಾಯಿ ನವರೋಜಿ, ರ್‍ಯಾನಡೆ, ಗೋಖಲೆ, ತಿಲಕ, ಮೊದಲಾದ ಸುಪ್ರಸಿದ್ಧ ದೇಶಭಕ್ತರೂ ಲಕ್ಷಾಧಿಕಾರಿಗಳಲ್ಲ. ಆದರೆ ಅವರು ತಮ್ಮ ಖ್ಯಾತಿಯನ್ನು ದೇಶದಲ್ಲೆಲ್ಲಾ ಹರಡಿ ಪರಂಧಾಮವನ್ನೈದಿದರು. ಅವರಲ್ಲಿ ದೀನದಯಾಪರತೆಯೆಂಬ ಒಂದು ದೊಡ್ಡ ಗುಣವು ವ್ಯಾಪಿಸಿಕೊಂಡಿದ್ದಿತು. ಲಕ್ಷಾಧಿಪತಿಗಳನೇಕರಲ್ಲಿ ಕಾರಣಾಂತರದಿಂದ ಈ ಗುಣವು ತೋರಿಬರುವುದಿಲ್ಲ. ಆದುದರಿಂದಲೇ ಪುರಾತನ ಕವಿಯೊಬ್ಬನು ಈ ರೀತಿ ಹೇಳಿರುವನು.

ತುಚ್ಛಗೆ ನೀಚಗೆ ಧನವತಿ ।
ಹೆಚ್ಚಿದೊಡೇನಾತ್ಮಭೋಗಪರಹಿತಕಿಲ್ಲಂ ॥
ಬಚ್ಚಲ ನೀರ್ ಕದಡಿದೊಡೇಂ ।
ನಿಚ್ಚಲದಿಂ ತಿಳಿಯದೊಡೇನೊ ಚೂಡಾರತ್ನಾ ॥

ನೀಚನಾದವನಿಗೆ ಒದಗುವ ಭಾಗ್ಯವು ಬಚ್ಚಲಲ್ಲಿ ತುಂಬಿಕೊಂಡಿರುವ ನೀರಿನಂತೆ ಅಸಹ್ಯವನ್ನುಂಟುಮಾಡುವುದು. ದಾನ

ಧರ್ಮ ಪರೋಪಕಾರಗಳ ಕಡೆಗೆ ಮನಸ್ಸನ್ನು ಕೊಡದೆ ಬಾಳುವ ಧನಿಕನು ಸರ್ವದಾ ಸಿಡುಕು ಮೋರೆಯುಳ್ಳವನಾಗಿಯೂ, ಬಡಬಗ್ಗರ ದರ್ಶನ ಮಾತ್ರದಿಂದ ಕೋಪಗೊಳ್ಳುವನಾಗಿಯೂ, ಕಾಣಬರುವನು. ಇಂತಹ ಮನುಷ್ಯನು ಭೂಮಿಗೆ ಭಾರವೆಂದೇ ಹೇಳಬೇಕಾಗಿದೆ. ಸಾವಿರಾರು ಬಡಪಾಯಿಗಳ ಗೋಳನ್ನು ಕನಿಕರದಿಂದ ಪರಿಹರಿಸಲು ಪ್ರಯತ್ನಿಸದ ಭಾಗ್ಯವಂತನನ್ನು ನಿರ್ಭಾಗ್ಯ ಲಕ್ಷ್ಮಿಯು ಸೇರುವಳು.

"ಪರೋಪಕಾರಾರ್ಥಮಿದಂ ಶರೀರಂ" ಎಂದು ಹೇಳಿದೆ. ಮನುಷ್ಯನು ಹುಟ್ಟುವಾಗ ಹೊತ್ತು ತರಲಿಲ್ಲ. ಸತ್ತ ಮೇಲೆ ಐಶ್ವರ್ಯವನ್ನು ತನ್ನ ಹಿಂದೆ ಕರೆದುಕೊಂಡು ಹೋಗುವುದಿಲ್ಲ. ಬತ್ತಲೆ ಬಂದು ಬತ್ತಲೆಯೇ ಹೋಗುತ್ತಾನೆ. ಪಾಪಪುಣ್ಯಗಳೆರಡೇ ಸತ್ತವನನ್ನು ಬೆನ್ನಟ್ಟಿ ಬರುತ್ತವೆ.

"ಗುಣವೊಂದಕಳುವರಲ್ಲದೆ ಹಣಕಳುವರೆ ಕಳೆದ ಬಳಿಕ ಸುಜನೋತ್ತಂಸಾ" ಎಂಬುದಾಗಿ ನೀತಿಮಂಜರಿಯು ನುಡಿಯುತ್ತದೆ. ಇದರ ಮರ್ಮವನ್ನು ಚೆನ್ನಾಗಿ ತಿಳಿದ ಅನೇಕ ಮಹನೀಯರು ಹಿಂದೆ ಹುಟ್ಟಿ ಬಾಳಿದರು ; ಈಗಲೂ ಇರುವರು ; ಮುಂದೆಯೂ ಹುಟ್ಟುವರು. ಯುದ್ಧದಲ್ಲಿ ತೊಳಲಿ, ಬಳಲಿ, ಬಾಯಾರಿಕೆಯಿಂದ ಪೀಡಿತನಾಗಿ, ನೀರನ್ನು ತರಿಸಿ ಕುಡಿಯುವಷ್ಟರಲ್ಲಿ, ತನ್ನಿದಿರಿಗೆ ತನ್ನಂತೆ ಬಾಯಾರಿಕೆಯಿಂದ ಕೊರಗುತ್ತಿದ್ದ ಸೈನಿಕನನ್ನು ನೋಡಿ ಕನಿಕರಪಟ್ಟು, ಆತನ ಕಷ್ಟವು ತನ್ನ ಕಷ್ಟಕ್ಕಿಂತಲೂ ಹೆಚ್ಚಿನದೆಂದು ಭಾವಿಸಿ, ಸರ್ ಫಿಲಿಪ್ ಸಿಡ್ನಿ ಎಂಬ ರಣಧೀರನು ತಾನು ಕುಡಿಯಬೇಕೆಂದಿದ್ದ ನೀರನ್ನು ಅವನಿಗಾಗಿ ಕಳುಹಿಸಿದನು.

ಹಿಂದೆ ಇಂಗ್ಲೆಂಡಿನಲ್ಲಿ ಹ್ಯಾಂಪ್‌ಡೆನ್ ಎಂಬೊಬ್ಬ ಪ್ರಸಿದ್ಧ ವರ್ತಕನಿದ್ದನು. ಆತನು ಲಕ್ಷಾಧಿಕಾರಿಯಾದರೂ, ಬಡವರ ಕಷ್ಟಸುಖಗಳನ್ನರಿತವನಾಗಿದ್ದನು. ಒಮ್ಮೆ ಸರ್ಕಾರದವರು ವರ್ತಕರ ಹಡಗುಗಳ ಮೇಲೆ ಸುಂಕವನ್ನು ಹಾಕಿದರು. ತನಗೆ ಕೊಡಲು ಶಕ್ತಿಯಿದ್ದರೂ, ಬಡಬಗ್ಗರ ಆಶೋತ್ತರಗಳನ್ನು ನೆನಪಿಗೆ ತಂದುಕೊಂಡು, ಹ್ಯಾಂಪ್‌ಡನ್ನನು ಸುಂಕವನ್ನು ಕೊಡುವುದಿಲ್ಲವೆಂಬುದಾಗಿ ಹಟಹಿಡಿದನು. ಇದರಿಂದ ಸರ್ಕಾರವು ಸುಂಕವನ್ನು ತಗ್ಗಿಸಬೇಕಾಯಿತು. ಬಡಬಗ್ಗರು ಸಂತೋಷದಿಂದ ಹಿಗ್ಗಿದರು.

ಹಿಂದೆ ಹೇಳಿದ ಮಹಾಪುರುಷರಿಬ್ಬರೂ ದ್ರವ್ಯಸಹಾಯ ಮಾಡಲಿಲ್ಲ. ಆದರೆ ಅವರು ಮಾಡಿದ ಸಹಾಯವು ಬರಿಯ ದ್ರವ್ಯ ಸಹಾಯಕ್ಕಿಂತಲೂ ಅತಿಶಯವಾದುದು. ಇಷ್ಟಾದರೂ ಅನೇಕರು ತಾವು ಧನಿಕರಾಗಿದ್ದರೆ ಬಡಬಗ್ಗರಿಗೆ ತುಂಬಾ ಸಹಾಯ ಮಾಡುತ್ತಿದ್ದೆವೆಂದು ಹೇಳುವುದುಂಟು. ಆದರೆ ಧನಿಕರಾಗುವುದರೊಳಗಾಗಿ ಮನಸ್ಸು ಕೆಟ್ಟುಹೋಗಿ, ಅವರು ವಿಷಯಾಸಕ್ತರಾಗಿ ತಮ್ಮ ಸುಖವನ್ನು ತಾವೇ ಕಳೆದುಕೊಳ್ಳುವರು. "ಅರ್ಥಾತುರಾಣಾಂ ನಗುರುರ್ನ ಬಂಧುಃ" ಎಂಬಂತೆ ಹಣದಾಶೆಯಲ್ಲಿ ಅವರು ಇತರರಿಗೆ ಸಹಾಯಮಾಡುವುದೆಲ್ಲಿಯದು ? ನಾನಾ ವಿಧವಾದ ಮೋಸ ಮಾರ್ಗಗಳಿಂದ ಆರ್ಜಿಸಿದ ಧನವು ಇಹಪರ ಸುಖಗಳಿಗೆ ಬರುವುದೆಂಬುದು ಸುಳ್ಳು ; ಹಣಕ್ಕಾಗಿ ಅಣ್ಣ ತಮ್ಮಂದಿರುಗಳಲ್ಲಿ ಹೋರಾಟ; ಹಣಕ್ಕಾಗಿ ಬಂಧು ಮಿತ್ರರಲ್ಲಿ ವ್ಯಾಜ್ಯ; ಹೀಗೆ ಯಾವ ಹಣದಿಂದ ಮನುಷ್ಯನು ಊರ್ಜಿತಸ್ಥಿತಿಗೆ ಬರುವೆನೆಂದು ಭಾವಿಸುವನೋ ಅದೇ

ಹಣವು ಅವಿವೇಕಕ್ಕೆಡೆಯಾಗಿ, ಅವನ ಇಹಪರಸುಖಗಳಿಗೆ ಹಾನಿಯನ್ನುಂಟುಮಾಡುವುದು.

ರಾಬರ್ಟ್ ಬರ್ನ್ಸ್ ಎಂಬ ಆಂಗ್ಲೇಯ ಕವಿಯು ಹೀಗೆ ಹೇಳಿರುವನು.

It's not in titles nor in rank ;
It's not in wealth like Lon'on Bank,
To purchase peace and rest.

ಎಂದರೆ, ಆನಂದವೆಂಬುದು ಬಿರುದಿನಲ್ಲಿಲ್ಲ ; ಅಧಿಕಾರ ದಲ್ಲಿಲ್ಲ ; ಐಶ್ವರ್ಯದಲ್ಲಿಯೂ ಇಲ್ಲ. ಜನಸೇವೆಯು ಮನುಷ್ಯ ನಿಗೆ ಪರಮಾನಂದವನ್ನುಂಟುಮಾಡುತ್ತದೆ. ಹಣಕ್ಕಾಗಿ ಬಾಯ ಬಿಡುತ್ತ ಕುಳಿತಿರಬಾರದು. ಆದರೆ, ಧನಿಕನಾಗು ವುದು ಅನುಚಿತವೆಂದು ಭಾವಿಸಬಾರದು. ಧನಾರ್ಜನೆಯಲ್ಲಿ ಮನುಷ್ಯನಿಗೆ ಎಷ್ಟು ಆತುರವಿರುವುದೋ, ಅಷ್ಟೇ ಆತುರ ವನ್ನು ದೀನದಯಾಪರತೆಯಲ್ಲಿಯೂ ಆತನು ತೋರ್ಪಡಿಸ ಬೇಕು. "ಧನಲಕ್ಷ್ಮಿಯು ಬರುವಾಗ ಹೇಳಿ ಬರುವುದಿಲ್ಲ; ಹೋಗುವಾಗ ಹೇಳಿ ಹೋಗುವುದಿಲ್ಲ. ಆದಕಾರಣ, ನಮ್ಮ ಸ್ವಾಧೀನದಲ್ಲಿಲ್ಲದ ಧನಕ್ಕೆ ನಾವು ಅಧೀನರಾಗಿ, ಧನದ ಗುಲಾ ಮರೆನಿಸಿಕೊಳ್ಳಬಾರದು." ಎಂಬುದಾಗಿ ರಿಚ್ಚರ್ಡ್ ಸ್ಟೀಲ್ ಎಂಬ ಆಂಗ್ಲೇಯ ಕವಿಯು ಬರೆದಿರುವನು. ಮನುಷ್ಯನು ಬಡವನಾಗಲಿ, ಬಲ್ಲಿದನಾಗಲಿ, ದೀನದಯಾಪರನಾಗಿದ್ದರೆ ಆಗ ಮಹೋಪಕಾರ ಕಾರ್ಯಗಳನ್ನು ಮಾಡಲು ಆತನಿಗೆ ಬುದ್ಧಿ ಯುಂಟಾಗುವುದು.

ಕೆಲವರು ಪರೋಪಕಾರಕ್ಕೆ ಮನಗೊಡಲು ಕಾಲವಿಲ್ಲ ವೆಂದು ಹೇಳಿಕೊಳ್ಳುವರು.

ಕಾಲೋಚಿತವರಿದಿತ್ತೊಡೆ ।
ಮೂಲೋಕವನಿತ್ತ ಸರಿಸಮಾನಮುದಕ್ಕುಂ ॥
ಮೇಲೆಡೆಯಾಡಿಸಿಕೊಟ್ಟರೆ ।
ಕೂಲಿಗೆ ಸರಿಯಾಗದಿಹುದೆ ಸುಜನೋತ್ತಂಸಾ ॥

ದೀನದಯಾಪರನು ಬಡಬಗ್ಗರಿಗೆ ಸಕಾಲದಲ್ಲಿ ಸಹಾಯ ಮಾಡಬೇಕು. ಹಿಂದು ಮುಂದಾಡಿ ಆಯಾಸಪಡಿಸುವುದರಿಂದ, ತಾನು ಮಾಡಿದ ದಾನವು ಆತನನ್ನು ದಣಿಸಿದ ಕೂಲಿಗೆ ಸಮಾನವಾಗುವುದು. ಮೋಸದ ಕೃತ್ಯಗಳಲ್ಲಿ ಮನಸೋತು, ಅನೇಕ ವೇಳೆ ಆಶಾಭಗ್ನರಾಗಿ ಓಡಾಡುವ ಜನರಿಗೆ ಧರ್ಮ ಕಾರ್ಯದ ಕಡೆಗೆ ಮನಸ್ಸನ್ನು ತಿರುಗಿಸಲು ಕಷ್ಟವಾಗುವುದರಲ್ಲಿ ಸೋಜಿಗವಿಲ್ಲ. ಪರಹಿತ ಕಾರ್ಯಕ್ಕೆ ತಕ್ಕಷ್ಟು ಧನಬಲವಿಲ್ಲವೆಂದೂ, ಕಾಲವಿಲ್ಲವೆಂದೂ ಹೇಳಿಕೊಳ್ಳುವ ಜನರಿಗೆ ಸಾಮಾನ್ಯವಾಗಿ ಚಿತ್ತ ಸ್ವಾತಂತ್ರ್ಯವಿರುವುದಿಲ್ಲ.

ಪರಹಿತಕಾರ್ಯಗಳಿಗೆ ಪ್ರವೇಶಿಸುವವರನ್ನು ಜನರು ಹೀಯಾಳಿಸುವುದುಂಟು. ಆದರೆ ಸತ್ಪುರುಷರು ಅವಹೇಳನಕ್ಕೆ ಹೆದರಿ, ತಮ್ಮ ಮಹತ್ಕಾರ್ಯದಿಂದ ಸ್ವಲ್ಪವಾದರೂ ಹಿಮ್ಮೆಟ್ಟುವುದಿಲ್ಲ. ರಾಜಾ ರಾಮಮೋಹನರಾಯರು ಸಹಗಮನ ಪದ್ಧತಿಯನ್ನು ನಿಲ್ಲಿಸಲು ಸರ್ ವಿಲಿಯಂ ಬೆಂಟಿಂಕರೊಡನೆ ಚರ್ಚಿಸುತ್ತಿರುವಾಗ ಎಷ್ಟೋ ಜನರು ಅವರನ್ನು ಹೀಯಾಳಿಸಿ ಜರಿದರು. ಏಬ್ರೆಹಾಮ್ ಲಿಂಕನ್‌ರವರು ಗುಲಾಮರ ಮಾರಾಟವನ್ನು ಉತ್ತರ ಅಮೇರಿಕದ ಸಂಯುಕ್ತ ಸಂಸ್ಥಾನದಲ್ಲಿ ತಪ್ಪಿಸಬೇಕೆಂದು ಹೊಡೆದಾಡುತ್ತಿರುವಾಗ ಅವರನ್ನು ಎಲ್ಲರೂ ಅಪವಾದಕ್ಕೆ ಗುರಿ ಮಾಡಿದರು. ದಾದಾಭಾಯಿ ನವರೋಜಿ, ಬೆಹಿರಾಂಜಿ ಮಲಬಾರಿ ಮೊದಲಾದ ಪಾರಸಿಕ ದೊಡ್ಡ ಮನು

ಷ್ಯರು, ಪಾರಸಿಕರ ಸಮಾಜದೇಳಿಗೆಗಾಗಿ ಹೋರಾಡುತ್ತಿರುವಾಗ ಅವರನ್ನು ಅನೇಕ ಪಾರಸಿಕರು ಮುಂದಾಲೋಚನೆ ಇಲ್ಲದೆ ನಿಂದೆಗೆ ಗುರಿಮಾಡಿದರು. ಪುಸಿಪ್ಪೂಟ್ ಜಾರ್ಸರ್ ರವರು ಮದ್ಯಪಾನವನ್ನು ತಪ್ಪಿಸಬೇಕೆಂದು ಪಟ್ಟ ಕಷ್ಟನಷ್ಟಗಳು ಇಡೀಪ್ರಪಂಚಕ್ಕೇ ತಿಳಿದಿರುವ ವಿಷಯವಾಗಿದೆ. ಆದರೂ ಮೇಲೆ ಹೇಳಿದ ಮಹನೀಯರು ಅಸ್ವಾರ್ಥತೆಯಿಂದ ಹಿಡಿದ ಕಾರ್ಯವನ್ನು ನೆರವೇರಿಸಿದರು. ತಾವು ಕೈಗೊಂಡ ಕೆಲಸದಲ್ಲಿ ಅವರು ಜಯಶೀಲರಾದುದು ಧನರಾಶಿಯ ಬಲದಿಂದಲ್ಲ. ಕೇವಲ ದೀನದಯಾಪರತೆಯೂ, ಕಾರ್ಯಗೌರವವೂ ಅವರಿಗೆ ಜಯವನ್ನುಂಟುಮಾಡಿದುವು. ಅವರು ತಮಗಿರುವ ಅನೇಕ ಕೆಲಸಗಳ ಮಧ್ಯೆ ಪರಹಿತಕಾರ್ಯಕ್ಕೆ ಕಾಲವಿಲ್ಲವೆಂದು ಹೇಳಲಿಲ್ಲ.

ಆದುದರಿಂದ, ಮನುಷ್ಯನಿಗೆ ಐಶ್ವರ್ಯದಿಂದ ಬಹುಮಾನವೂ, ಐಶ್ವರ್ಯದಿಂದ ಸುಖಸಾಮರ್ಥ್ಯಗಳೂ ದೊರಕುವುವೆಂದು ನಂಬಿ ಮೋಸಹೋಗಬಾರದು. ಲೋಭಿಯೂ, ದುರಾಶಾಪೂರ್ಣನೂ ಆದ ಧನಿಕನ ಮನಸ್ಸು ಯಾವಾಗಲೂ ಚಿಂತೆಯಿಂದ ಕೂಡಿರುತ್ತದೆ. ಈ ಚಿಂತೆಯೆಂಬ ದಾವಾಗ್ನಿಯಲ್ಲಿ ಆತನ ಸುಖವೆಲ್ಲವೂ ಬೆಂದುಹೋಗುತ್ತದೆ. ಇದರಿಂದ ಆತನಿಗೂ, ಆತನ ನೆರೆಹೊರೆಯವರಿಗೂ ಯಾವ ವಿಧವಾದ ಸುಖಸಂಪತ್ತುಗಳೂ ಉಂಟಾಗಲಾರವು.

“ ಅದಾನದೋಷೇಣ ಭವೇದ್ದರಿದ್ರಃ ” ಎಂಬುದಾಗಿ ನೀತಿಶಾಸ್ತ್ರದಲ್ಲಿ ಹೇಳಿರುವುದರಿಂದ, ಬಡವನಾಗಲಿ, ಭಾಗ್ಯವಂತನಾಗಲಿ, ಧನಾರ್ಜನೆಗೆ ತನ್ನೊಡಲ ಪೋಷಣೆಯೇ ಮುಖ್ಯವಾದ ಉದ್ದೇಶವೆಂದು ತಿಳಿಯಬಾರದು. ನ್ಯಾಯರೀತಿಯಲ್ಲಿ

ದೊರಕಿದ ದ್ರವ್ಯವನ್ನು ಪರಸ್ಪರ ಸಹಾಯಕ್ಕೆ ವಿನಿಯೋಗಿಸದೆ ನೆಲದಲ್ಲಿ ಹೂತಿಟ್ಟು, ಭೂಲೋಕದಲ್ಲಿ ಕೇವಲ ನರಕಯಾತನೆಯನ್ನನುಭವಿಸಿ ಸಾಯಬಾರದು.

ಭಗವಂತನು ತಮಗೆ ಕೊಟ್ಟಿರುವ ಅಪೂರ್ವವಾದ ದೀನದಯಾಪರತೆಯನ್ನು ಜನರು ಕಳೆದುಕೊಳ್ಳುವುದು ಸರಿಯಲ್ಲ. ಕಷ್ಟಕ್ಕೆ ಸಿಲುಕಿ ನರಳುತ್ತಿರುವವನಿಗೆ ಮನೋವಾಕ್ಕಾಯಗಳಿಂದಲೂ ಸಹಾಯ ಮಾಡಬೇಕು. ದೀನದಯಾಪರನಾದ ಬಡವನು ಸ್ವಾರ್ಥಪರನಾದ ಧನಿಕನಿಗಿಂತಲೂ ಪರಮ ಮಂಗಳಕರನೆಂದು ಭಾವಿಸಬೇಕು. ಇಂತಹ ಮಹಾತ್ಮರ ದೆಸೆಯಿಂದ ಎಲ್ಲೆಲ್ಲಿಯೂ ಸುಖಸಂತೋಷಗಳು ಹರಡಿ ಶಾಂತತೆಯು ನೆಲೆಗೊಳ್ಳುವುದು. ಆದುದರಿಂದ, ಯಾರೇ ಆಗಲಿ, ದಾನಧರ್ಮ ಪರೋಪಕಾರಗಳಿಗೆ ತಕ್ಕಷ್ಟು ಧನವು ತನ್ನಲ್ಲಿಲ್ಲವೆಂದೂ, ಒಂದು ವೇಳೆ ಇದ್ದರೂ ತನಗಿರುವ ಕಾರ್ಯವಿಶೇಷಗಳಲ್ಲಿ ಈ ಮಹತ್ಕಾರ್ಯಗಳ ಕಡೆಗೆ ಗಮನ ಕೊಡಲು ಅವಕಾಶವಿಲ್ಲವೆಂದೂ ಹೇಳುವುದು ಸರಿಯಲ್ಲ. ಅಧಿಕ ಸಂಪತ್ತಿಲ್ಲದಿದ್ದರೇನು ? ಮನಸ್ಸಿದ್ದರೆ ಮಾರ್ಗವಿದ್ದೇ ಇರುವುದು. ದೀನದಯಾಪರನಾದ ಮನುಷ್ಯನಿಗೆ ದೌರ್ಭಾಗ್ಯವೂ, ಕಾಲದೋಷವೂ, ನಿಂದೆಯೂ, ಸ್ಥಿತಿಗತಿಗಳೂ, ಎಂದಿಗೂ ಅಡ್ಡಿಯನ್ನು ಮಾಡುವುದಿಲ್ಲ.

---

# ಪ್ರಕರಣ ೩

## ಆರೋಗ್ಯ

ಆರೋಗ್ಯವೆಂಬುದು ಮನುಷ್ಯನ ಗುಣಗಳಲ್ಲಿ ಸೇರಿದುದಲ್ಲವಾದರೂ ಪ್ರಕೃತದಲ್ಲಿ ಅದರ ಆವಶ್ಯಕತೆಯನ್ನು ವಿವರಿಸಬೇಕಾಗಿದೆ. ಆರೋಗ್ಯವೇ ಸರ್ವಜಯಕ್ಕೂ ಮೂಲ; ಇಷ್ಟಾದರೂ ನಮ್ಮಲ್ಲಿ ಗುಣ, ಯೌವನ, ಕಳೆ, ರೂಪುಗುಂದಿದ ಜೀವಚ್ಛವಗಳು ಕಾಣಿಸಿಕೊಳ್ಳುತ್ತಿರುವವು. ರೋಂ ಮತ್ತು ಗ್ರೀಕ್ ದೇಶಗಳ ಜನರು ಪೂರ್ವಕಾಲದಲ್ಲಿ ಬಹಳ ದೃಢಕಾಯರಾಗಿದ್ದುದರಿಂದ ಆ ದೇಶಗಳಲ್ಲಿ ಅದ್ಭುತವಾದ ಶರೀರಪುಷ್ಟಿಯುಳ್ಳ ಅನೇಕ ಪ್ರತಿಮೆಗಳು ಅಲ್ಲಿಯ ರಾಜಮಾರ್ಗಗಳಲ್ಲಿಯೂ, ಹೂದೋಟಗಳಲ್ಲಿಯೂ ಸ್ಥಾಪಿಸಲ್ಪಟ್ಟವೆ. ಈ ಪ್ರತಿಮೆಗಳ ದರ್ಶನದಿಂದ ಜನರು ಅವುಗಳ ದೇಹದಾರ್ಢ್ಯವನ್ನು ನೋಡಿ ಭ್ರಮೆಗೊಳ್ಳುವರು.

ಮನುಷ್ಯನು ದೀನದಯಾಪರನಾಗಿರಬಹುದು. ಆದರೆ ಆರೋಗ್ಯ ಒಂದಿಲ್ಲದಿದ್ದರೆ ಆತನಿಂದ ಜನಸಾಮಾನ್ಯಕ್ಕೆ ಯಾವ ಉಪಕಾರವೂ ಉಂಟಾಗುವುದಿಲ್ಲ. ಯಾರು ಪ್ರಪಂಚದಲ್ಲಿ ಶಾಶ್ವತವಾಗಿ ನಿಲ್ಲುವ ಮಹೋಪಕಾರವನ್ನು ಮಾಡಬೇಕೆಂದು ಬಯಸುವರೋ, ಯಾರು ತಮ್ಮ ದರ್ಶನ ಮಾತ್ರದಿಂದ ಪ್ರೇಕ್ಷಕರಿಗೆ ಪರಮಾನಂದವನ್ನುಂಟುಮಾಡಲುಳ್ಳವರೋ, ಅಂತಹ ಮಹನೀಯರು ತಮ್ಮ ದೇಹಾರೋಗ್ಯಕ್ಕೆ ವಿಶೇಷ ಗಮನ ಕೊಡಬೇಕು. ಕಾರಣಾಂತರಗಳಿಂದ ಶರೀರಾರೋಗ್ಯವನ್ನು ಹಾಳುಮಾಡಿಕೊಂಡು, ಹಾದಿಬೀದಿಗಳಲ್ಲಿ ನಡೆವೆಣಗಳಂತೆ ಅಲೆಯುತ್ತಿರುವ ಅನೇಕರು ತಮ್ಮ ಕೆಟ್ಟ ಚಾಳಿಗೆ ಈಗ ದುಃಖ

ಪಡಬೇಕಾಗಿದೆ. ಆರೋಗ್ಯವಿಲ್ಲದವನಿಗೆ ಸುಖವಿಲ್ಲ; ಸುಖವಿಲ್ಲದವನಿಗೆ ಸಂತೋಷವಿಲ್ಲ; ಸಂತೋಷವಿಲ್ಲದವನಿಗೆ ಸಾಮರ್ಥ್ಯವಿಲ್ಲ; ಸಾಮರ್ಥ್ಯವಿಲ್ಲದವನಿಗೆ ಚಿತ್ತಸ್ಥೈರ್ಯವಿಲ್ಲ; ಚಿತ್ತಸ್ಥೈರ್ಯವಿಲ್ಲದವನಿಗೆ ಪರೋಪಕಾರ ಬುದ್ಧಿಯಿಲ್ಲ. ಧನಿಕನಾದವನು ಆರೋಗ್ಯವನ್ನು ಕೊಂಡುಕೊಳ್ಳಲಾರನು. ಭಗವಂತನು ಕೊಟ್ಟಿರುವ ಪರಮಪವಿತ್ರವಾದ ಆರೋಗ್ಯವನ್ನು ಕಳೆದುಕೊಂಡು, ಕೇವಲ ಮನುಷ್ಯಮಾತ್ರನಾದ ವೈದ್ಯನಿಂದ ಗುಣಪಡಿಸಿಕೊಳ್ಳುವೆನೆಂದು ಹಿಗ್ಗುವ ಮಾನವನನ್ನು ಹೇಡಿಯೆಂದೇ ಭಾವಿಸಬೇಕು.

ಜಾನ್ ಗೇ ಎಂಬ ಆಂಗ್ಲೇಯ ಕವಿಯು ಹೇಳಿರುವಂತೆ,

"Nor love nor honour, wealth nor power ;
Can give the heart a cheerful hour
When health is lost, be timely wise ;
With health all taste of pleasure flies."

ಎಂದರೆ, ಪ್ರಪಂಚದಲ್ಲಿ ಧನಧಾನ್ಯವೇ ಮೊದಲಾದ ಅಧಿಕ ಸಂಪತ್ತುಗಳಾವುವೂ ಆರೋಗ್ಯಕ್ಕೆಣೆಯಾಗಲಾರವು. ಸರ್ವ ಬಲವೂ ಆರೋಗ್ಯದ ದೆಸೆಯಿಂದಲೇ ಉಂಟಾಗಬೇಕಾಗಿದೆ. ಆರೋಗ್ಯವು ನಷ್ಟವಾದರೆ ಸರ್ವಸ್ವವೂ ನಷ್ಟವಾದಂತೆ ಭಾವಿಸಬೇಕು. ಮನುಷ್ಯನ ಲವಲವಿಕೆಯೂ, ಆಲೋಚನಾಶಕ್ತಿಯೂ, ಶಕ್ತಿ ಸಾಮರ್ಥ್ಯಗಳೂ, ಅಧಿಕಾರವೂ, ಯೌವನವೂ, ಆರೋಗ್ಯದ ಜತೆಯಲ್ಲಿಯೇ ಹಾರಿಹೋಗುವುವು. ರೋಗಿಗೆ ಭೂಲೋಕವೇ ನರಕವಾಗಿ ಪರಿಣಮಿಸುವುದು. ಬಂಧು ಬಳಗವೂ, ಪತ್ನೀಪುತ್ರರೂ ದೂರವಾಗುವರು. ಸವಿನುಡಿಯ ವಾರಾಂಗನೆಯರು ಹಿಮ್ಮೆಟ್ಟುವರು. ಮುತ್ತಿನ

ಮಂಚವು ಮುಳ್ಳಿನ ಮಂಚವಾಗುವುದು. ಅನ್ನೋದಕಗಳು ವಿಷಮಯವಾಗುವವು. ವಿಹಾರಭವನದ ಸೊಗಸು ಮಾಯವಾಗುವುದು.

ಹೀಗೆ, ಆರೋಗ್ಯದ ಆವಶ್ಯಕತೆಯನ್ನು ಎಷ್ಟು ಹೇಳಿದರೂ ತೀರದು. ನಮ್ಮ ಆರೋಗ್ಯವನ್ನು ನಾವು ಸರಿಪಡಿಸಿಕೊಳ್ಳಲು ಶಕ್ತರಾಗಿರುವಾಗ, ರೋಗ ಬಂದರೆ ದೇವರನ್ನು ದೂರುವುದು ಹುಚ್ಚುತನವೇ ಸರಿ. ಮನುಷ್ಯನು ತನ್ನ ಆರೋಗ್ಯವನ್ನು ಕಾಪಿಟ್ಟುಕೊಳ್ಳಬೇಕಾದರೆ, ಸ್ವಭಾವವಿರುದ್ಧವಾದ ಯಾವ ವಿಷಯಕ್ಕೂ ಗಮನ ಕೊಡಬಾರದು.

ಆರೋಗ್ಯವಂತನೆಂದರೆ ದೃಢಕಾಯನಾಗಿರುವುದು ಮಾತ್ರವೇ ಅಲ್ಲ. ಆರೋಗ್ಯ ಬಲದಿಂದ, ಕೀರ್ತಿಶೇಷರಾದ ಮಹಾತ್ಮರನೇಕರು ತಾವು ಹಿಡಿದ ಕಾರ್ಯವನ್ನು ಗೆಲ್ಲುವ ಸಾಮರ್ಥ್ಯವನ್ನು ಪಡೆದರು. ಬೈರನ್, ಷೆಲ್ಲಿ, ಕೀಟ್ಸ್, ಬರ್ನ್ಸ್, ಇವರೇ ಮೊದಲಾದ ಪ್ರಖ್ಯಾತ ಆಂಗ್ಲೇಯ ಕವಿಗಳೂ, ವಿಲಿಯಂ ಪಿಟ್, ಗೋಖಲೆ, ದಾದಾಭಾಯಿ ನವರೋಜಿ, ಮಹಾತ್ಮಾ ಗಾಂಧಿ ಮೊದಲಾದ ರಾಜ್ಯಶಾಸನಕರ್ತರೂ, ದೃಢಾಂಗರಾಗಿ ತಮಗಿದ್ದ ಅಧಿಕವಾದ ಮೇಧಾಶಕ್ತಿಯ ಪ್ರಭಾವದಿಂದ ಮಹತ್ಕಾರ್ಯಗಳನ್ನು ಮಾಡಿರುತ್ತಾರೆ. ಶರೀರಾರೋಗ್ಯವುಳ್ಳವನಿಗೆ ಮೆದುಳು ಮತ್ತು ಪಂಚೇಂದ್ರಿಯಗಳ ಕೆಲಸಗಳು ಕಾಲಕಾಲಕ್ಕೆ ಸರಿಯಾಗಿ ನಡೆಯುತ್ತಿರುವುದರಿಂದ ಆತನು ತನ್ನ ಜೀವಮಾನವನ್ನು ಪರೋಪಕಾರಕ್ಕಾಗಿ ಕಳೆದು ಇಹದಲ್ಲಿ ಸುಖವನ್ನೂ ಪರದಲ್ಲಿ ಮುಕ್ತಿಯನ್ನೂ ಪಡೆಯುವನು.

ಸ್ನಾನವು ಆರೋಗ್ಯಕ್ಕೆ ಮುಖ್ಯವಾದ ಒಂದು ಭಾಗವು; ಅದುದರಿಂದಲೇ ನಮ್ಮ ಪೂರ್ವಿಕರು ನದಿಗಳಿಗೆ ಪವಿತ್ರತೆಯನ್ನು

ಕೊಟ್ಟು ರೂಢಿಯಲ್ಲಿ ತಂದಿರುವರು. ಪಾಶ್ಚಾತ್ಯರೂ ಜಪಾನಿನವರೂ ಜಲವಿಹಾರ ಸ್ಥಳಗಳನ್ನೂ, ಸ್ನಾನಘಟ್ಟಗಳನ್ನೂ, ಪಟ್ಟಣಗಳಲ್ಲಿ ತುಂಬಿಸಿ, ಪ್ರಜೆಗಳಿಗೆ ಆನಂದವನ್ನುಂಟುಮಾಡುತ್ತಿರುವರು. ನದಿಯ ಸ್ನಾನವು ಉತ್ಕೃಷ್ಟವಾದುದು. ಅದಕ್ಕಿಂತ ಅಪಾರ ಜಲರಾಶಿಯುಳ್ಳದಾಗಿ ತರಂಗತರಂಗವಾಗಿ ತೀರ ಪ್ರದೇಶವನ್ನು ಚುಂಬಿಸುವ ಸಮುದ್ರಸ್ನಾನವು ಅತ್ಯಧಿಕ ಮನೋಹರತೆಯನ್ನುಂಟುಮಾಡುತ್ತದೆ. ತಣ್ಣೀರ ಸ್ನಾನವು ಚರ್ಮದ ಒಳಪೊರೆಗೆ ಕಾಂತಿಯನ್ನುಂಟುಮಾಡುವುದು.

ಆರೋಗ್ಯಕ್ಕೆ ಮೂಲಾಧಾರವಾಗಿಯೂ ಸ್ವಭಾವಸಿದ್ಧವಾಗಿಯೂ ಇರುವ ನಿತ್ಯಕರ್ಮಗಳಲ್ಲಿ ಭೋಜನವು ಎರಡನೆಯದು. ಆಹಾರವು ಯಾವುದೆಂದು ನಿಷ್ಕರ್ಷೆ ಮಾಡಿ, ನಿಯತ ಕಾಲಗಳಲ್ಲಿ ಮಿತವಾಗಿ ಊಟಮಾಡುವುದರಿಂದ ಆರೋಗ್ಯವು ಕೆಡುವುದಿಲ್ಲ. "Eat to live, but not live to eat" ಎಂದು ಆಂಗ್ಲೇಯರು ಹೇಳುವರು. ಊಟಮಾಡುವುದೇತಕ್ಕೆಂದು ಪ್ರಶ್ನೆ ಮಾಡಿದರೆ, ಪ್ರಾಣವನ್ನುಳಿಸಿಕೊಳ್ಳುವುದಕ್ಕೆಂದು ಹೇಳಬಹುದು. ಆದರೆ ಪ್ರಾಣವನ್ನುಳಿಸಿಕೊಳ್ಳುವುದೇತಕ್ಕೆಂದು ಕೇಳಿದರೆ, ಊಟಮಾಡುವುದಕ್ಕೆಂದು ಹೇಳಲಾಗದು. ಮಾಡಿದ ಅಡುಗೆಯನ್ನು ನೋಡಿ ಬಿಡಲಾರದೆ, ಅನೇಕರು ಕಟ್ಟೆರೆಯಾಗುವಂತೆ ತಿಂದು, ಅಜೀರ್ಣವನ್ನುಂಟುಮಾಡಿಕೊಂಡು ರೋಗಪೀಡಿತರಾಗಿ ನರಳುವರು. ಮಿತವಾಗಿ ಊಟಮಾಡುವುದರಿಂದ ಯಾವ ಬಾಧಕವೂ ಇಲ್ಲದೆ, ಮನುಷ್ಯನು ದೀರ್ಘಾಯುರಾರೋಗ್ಯವನ್ನು ಪಡೆಯುವನು; ಆಗ ಲವಲವಿಕೆಯುಂಟಾಗುವುದು. ಬಾಯಿಗೆ ರುಚಿಯಾದ ಆಹಾರವನ್ನು ಮಿತಿಮೀರಿ ತಿಂದರೆ ಅಜೀರ್ಣದಿಂದ ಉಷ್ಣಾತಿರೇಕ ಉಂಟಾಗಿ ನೇತ್ರ

ಟವವು ಕಡಿಮೆಯಾಗುವುದು. ಮೆದುಳು ಸರಿಯಾಗಿ ಕೆಲಸ ಮಾಡದೆ ಮನುಷ್ಯನಿಗೆ ಜಡಭಾವವುಂಟಾಗುವುದು.

ಮಾಂಸಾಹಾರವನ್ನು ಬಿಡುವುದರಿಂದ ಹಿತವುಂಟು. ಮಾಂಸಾಹಾರದಿಂದುಂಟಾಗಬಹುದಾದ ಸಾಧಕಗಳಿಗಿಂತಲೂ ಬಾಧಕಗಳು ವಿಪರೀತವಾಗಿವೆ. ಪ್ರೊಫೆಸರ್ ಲಾರೆನ್ಸ್, ಡಾಕ್ಟರ್ ಡಾರ್ವಿನ್ ಮೊದಲಾದ ಶಾರೀರಧರ್ಮಶಾಸ್ತ್ರಜ್ಞರು ಮನುಷ್ಯನಲ್ಲಿ ಮಾಂಸಾಹಾರಿಗಳಿಗೆ ತಕ್ಕುವಾದ ಕೆಲವು ಅವಯವಗಳು ಇರುವುದಿಲ್ಲವೆಂದು ಕಂಡುಹಿಡಿದಿರುವರು. ನಮ್ಮ ಹಲ್ಲುಗಳು ಸಸ್ಯಾಹಾರ ಪ್ರಾಣಿಗಳಿಗಿರುವಂತೆ ಚಪ್ಪಟೆಯಾಗಿರುವುವೇ ವಿನಾ ಮಾಂಸಾಹಾರಿಗಳಿಗೆ ತಕ್ಕ ಕೋರೆದಾಡೆಗಳು ಇರುವುದಿಲ್ಲ. ನಮ್ಮ ಜೀರ್ಣಕೋಶವೂ, ಅದಕ್ಕೆ ಸಂಬಂಧಪಟ್ಟ ಕಾರ್ಯಗಳೂ, ವಿಶೇಷವಾಗಿ ಸಸ್ಯಾಹಾರಿಗಳಿಗೆ ಅನುಗುಣವಾಗಿರುವವು. ಮೊದಲೇ ಕಟ್ಟರೆಯಾಗಿ ತಿನ್ನುವ ಹೊಟ್ಟೆಬಾಕನು ಅದರಲ್ಲಿಯೂ ಮಾಂಸಾಹಾರವನ್ನು ಭುಜಿಸಿದರೆ, ಆ ಮಾಂಸವು ಕೊಳೆತು, ಚಪ್ಪಟೆಯಾಗಿಯೂ, ಬಹಳ ಉದ್ದವಾಗಿಯೂ ಇರುವ ಬಿಳಿಯ ನಾರು ಹುಳುವು (tape worm) ಹೊಟ್ಟೆಯಲ್ಲಿ ಸೇರಿ, ಆತನ ಆಯುರಾರೋಗ್ಯವನ್ನೆಲ್ಲಾ ತಾನು ತೆಗೆದುಕೊಳ್ಳುತ್ತದೆ. ಅನಂತರ ಮನುಷ್ಯನಿಗೆ ಮರಣವೇ ಪ್ರಾಪ್ತಿಯಲ್ಲದೆ ಬದುಕುವ ಆಶೆಯೆಲ್ಲಿಯದು? ಉತ್ತರ ಇಂಡಿಯಾದಲ್ಲಿ ಸಾಮಾನ್ಯವಾಗಿ ಎಲ್ಲರೂ ಸಸ್ಯಾಹಾರಿಗಳೇ; ದಕ್ಷಿಣ ಇಂಡಿಯಾದಲ್ಲಿಯೂ ಈಗೀಗ ಮಾಂಸಾಹಾರವನ್ನು ಬಿಡುತ್ತಿರುವರು. ಮಾಂಸಾಹಾರಿಗಳಾದ ಇಂಗ್ಲಿಷರ ಬುಡಕಟ್ಟಿಗೆ ಸೇರಿದ ಅಮೇರಿಕದವರು ಮಾಂಸಾಹಾರವನ್ನು ಬಿಡುತ್ತಿರುವಾಗ, ನಮ್ಮಲ್ಲಿ ಕೆಲವರು ಇನ್ನೂ ಅಕ್ಕರೆಯಿಂದ ಮಾಂಸ

ವನ್ನು ತಿಂದು ತೇಗುತ್ತಿರುವುದನ್ನು ನೋಡಿದರೆ ನಾಚಿಕೆಯುಂಟಾಗುವುದು. ಸತ್ವವುಳ್ಳ ಆಹಾರವನ್ನು ಭುಜಿಸಲು ಗಮನ ಕೊಡಬೇಕಾಗಿದೆ. ಜಿಹ್ವಾಚಾಪಲ್ಯದಿಂದ ಕಣ್ಣಿಗೆ ಕಾಣುವುದನ್ನೆಲ್ಲಾ ಭಕ್ಷಿಸಬಾರದು. ರುಚಿಯಾದ ಭೋಜನವು ಅನರ್ಥವನ್ನುಂಟುಮಾಡುತ್ತದೆ.

ಆಹಾರವನ್ನು ಚೆನ್ನಾಗಿ ಅಗಿದು ತಿನ್ನಬೇಕು. ಗವಗವನೆ ನುಂಗುವುದು ನಾಯಿಗೆ ಸ್ವಭಾವಸಿದ್ಧವಾದುದು. ಆದರೆ ಮನುಷ್ಯರು ನಾಯಿಗಳಲ್ಲವೆಂದು ಈ ಸಮಯದಲ್ಲಿ ನೆನಪಿನಲ್ಲಿಡಬೇಕು. ಹಲ್ಲುಗಳು ಬಾಯಿಯಲ್ಲಿರುವುವೇ ವಿನಾ ಹೊಟ್ಟೆಯಲ್ಲಿಲ್ಲ. ಆದುದರಿಂದ ಹಲ್ಲಿನ ಕೆಲಸವನ್ನು ಹೊಟ್ಟೆಗೆ ಕೊಡುವುದು ಸ್ವಭಾವವಿರುದ್ಧವಾದುದು.

ಹಸಿವಾದಾಗ ಊಟಮಾಡಬೇಕು. ಜೀರ್ಣಕೋಶಗಳು ಮನುಷ್ಯನ ಸ್ವಾಧೀನದಲ್ಲಿಲ್ಲ. ಅವುಗಳಿಗೆ ಬಾಧಕವುಂಟಾಗದಂತೆ ನಾವು ನಡೆಯದೆ ಹೋದರೆ, ಕೆಲವು ಕಾಲದಲ್ಲಿಯೇ ಅವು ಬಲಹೀನವಾಗಿ ತಮ್ಮ ಕೆಲಸವನ್ನು ಸರಿಯಾಗಿ ನಡೆಯಿಸುವುದಿಲ್ಲ. ಆಗ ಜೀರ್ಣಶಕ್ತಿಯು ಕಡಿಮೆಯಾಗಿ, ತಿಂದ ಆಹಾರವು ವಿಷಮಯವಾಗಿ ಅನಾರೋಗ್ಯದ ಗಣಿಯಾಗಿ ಪರಿಣಮಿಸುವುದು.

ಅಭಕ್ಷ್ಯಭೋಜನದಿಂದ ಉಂಟಾಗುವ ಕೆಡಕಿಗಿಂತಲೂ ಅಪೇಯಪಾನದಿಂದ ಉಂಟಾಗುವ ಕೆಡಕುಗಳು ಅಪರಿಮಿತವಾಗಿದೆ. ಮಾದಕವಸ್ತು ಸೇವನೆಯಿಂದ ಜೀರ್ಣಕೋಶವು ಹಾಳಾಗುವುದು. ಮೊತ್ತಮೊದಲು ಹಿತಕರವಾಗಿದ್ದರೂ, ಕ್ರಮೇಣ ಹಾನಿಕರವಾದ ಈ ಮಾದಕ ದ್ರವ್ಯಗಳಿಗಾಗಿ ಲಕ್ಷೋಪಲಕ್ಷ

ಹಣವನ್ನು ಹಾಳುಮಾಡಿ, ಕುರೂಪಿಗಳಾಗುವ ಜನರು ಕರ್ಮ ಚಂಡಾಲರೇ ಸರಿ. ನಸ್ಯದಿಂದ ಕಣ್ಣುಗಳೂ, ಮೂಗಿನ ಬುಡವೂ, ವಿರೂಪವಾಗುವವು. ಹೊಗೆಯ ಬತ್ತಿಯನ್ನು ಸೇದುವುದರಿಂದ ಶ್ವಾಸಕೋಶವು ಕೆಟ್ಟುಹೋಗುವುದು. ಈ ವಿಷಯಗಳನ್ನು ತಿಳಿದಿದ್ದರೂ ತಿಳಿಯದವರಂತೆ ಜನರು ನಟಿಸುವುದು ವ್ಯಸನಕರವಾಗಿದೆ.

ಕಾಲಕಾಲಕ್ಕೆ ಮಾಡತಕ್ಕ ಕೆಲಸಗಳನ್ನು ಮಾಡಿ ಶರೀರ ಪ್ರಕೃತಿಯನ್ನು ನೆಟ್ಟಗೆ ಇಟ್ಟುಕೊಳ್ಳಲು ಗಮನ ಕೊಡಬೇಕು. ಕಾಮ ಕ್ರೋಧಾದಿ ಅರಿಷಡ್ವರ್ಗಗಳಿಗೆ ಅಧೀನರಾಗಬಾರದು. ಮನುಷ್ಯನು ತನ್ನ ವಯಸ್ಸಿಗೂ, ಕೆಲಸಕ್ಕೂ ತಕ್ಕ ಹಾಗೆ ನಿದ್ರೆ ಮಾಡಬೇಕು. ನಮ್ಮ ಶರೀರದಲ್ಲಿ ನಶಿಸಿಹೋದ ಭಾಗಗಳು ಬೆಳೆಯಲು ನಿದ್ರೆಯು ತಕ್ಕ ಅವಕಾಶವಾಗಿದೆ. ನಿದ್ರೆಯ ಕಾಲವನ್ನು ಚರ್ಚೆಮಾಡಿ ನಿರ್ಣಯಿಸಲು ಇದು ಸಮಯವಲ್ಲ. ಆದರೆ, ಆರು ಗಂಟೆಗಳ ಸುಖನಿದ್ರೆಯು ಆರೋಗ್ಯಕ್ಕೆ ಸಾಕಾಗಿದೆ. ಅಭಿವೃದ್ಧಿಗೆ ಬರಬೇಕೆಂದು ಬಯಸುವ ಸಮಸ್ತ ಜನರೂ ಹಗಲು ನಿದ್ರೆಯನ್ನು ಬಿಡಬೇಕು. ಹಗಲು ನಿದ್ರೆಯಿಂದ ಸೋಮಾರಿತನವೂ, ಜಡಭಾವವೂ ಲಭಿಸುವವು.

ನಿರ್ಮಲವಾದ ಉಡುಪನ್ನು ಧರಿಸಬೇಕು. ಸಕಲರೂ ಅತ್ಯವಶ್ಯವಾಗಿ ಗಮನಿಸಬೇಕಾದ ವಿಷಯವು ಮತ್ತೊಂದುಂಟು. ನಮ್ಮ ಮನಸ್ಸನ್ನು ನೀಚಕೃತ್ಯಗಳ ಕಡೆಗೆ ತಿರುಗಿಸಿದರೆ, ನಾವು ಮಾಡುವ ಕೆಲಸವೇ ನಮಗೆ ಅತಿ ಭಯಂಕರವಾದ ಹಾನಿಯನ್ನು ತಂದಿಡುವುದು. ಆದುದರಿಂದ, ನಮ್ಮ ಮನೋಭಾವವು ಯಾವಾಗಲೂ ಅತಿ ಮನೋಹರವಾದ ಆಲೋಚನೆಗಳಿಂದ ಕೂಡಿದ್ದರೆ, ನಾವು ನಿರಂತರವಾದ ಆರೋ

ಗ್ಯವನ್ನು ಪಡೆಯಬಹುದೆಂದು ಅಡಿರ್ಸ ಎಂಬ ಆಂಗ್ಲೇಯ ಕವಿಯು ಹೇಳಿರುವನು. ಸ್ತ್ರೀ ಪುರುಷರಿಗೆ ಜನನೇಂದ್ರಿಯ ರೋಗಗಳು ಅವರ ದುರ್ವ್ಯಾಪಾರಗಳಿಂದ ಸಂಭವಿಸುವುವು. ಅನೇಕ ಸ್ತ್ರೀಪುರುಷರು ಇಂದ್ರಿಯ ಭೋಗವೇ ಸೌಖ್ಯಪರಂಪರೆಯ ಸೋಪಾನವೆಂದು ತಿಳಿಯುತ್ತಾರೆ. ಕೊನೆಕೊನೆಗೆ ಸುಖಮಯವಾದ ಸಂಸಾರವು ದುಃಖಮಯವಾಗಿ ಪರಿಣಮಿಸುವುದು ; ಪುರುಷನಿಗೆ ಚೈತನ್ಯವು ಕುಗ್ಗುವುದು ; ಸ್ತ್ರೀಗೆ ಪುರುಷನಲ್ಲಿರುವ ಅನುರಾಗವು ಕಡಿಮೆಯಾಗುವುದು. ಯೌವನದ ಸೊಬಗಿನಿಂದ ಮೆರೆಯುವ ತರುಣ ತರುಣಿಯರು ಹೀಗೆ ಶರೀರ ದಾರ್ಢ್ಯವನ್ನು ನಾಶಮಾಡಿಕೊಂಡು, ೩೦-೪೦ ವರ್ಷಗಳಲ್ಲೇ ವೃದ್ಧರಾಗಿ, ರೋಗಾದಿಗಳಿಂದ ಪೀಡಿತರಾಗಿರುವುದನ್ನು ಹೇರಳವಾಗಿ ನೋಡಬಹುದಾಗಿದೆ. ಮುಖ್ಯವಾಗಿ, ಬಾಲಕರ ಮತ್ತು ಬಾಲಿಕೆಯರ ಆರೋಗ್ಯವು ಕೆಡುವುದಕ್ಕೆ ದುರಾಹಾರವು ಮಾತ್ರವಲ್ಲದೆ ವೀರ್ಯನಷ್ಟವೂ, ವ್ಯಾಯಾಮವಿಲ್ಲದಿರುವಿಕೆಯೂ ಕಾರಣವಾಗಿವೆ. ವೀರ್ಯನಷ್ಟವಾದರೆ ರೋಗಗಳು ಯುವತೀಯುವಕರನ್ನಡರುವವು. ಆಗ ಅವರು ನಿಜವಾದ ಕಾರಣವನ್ನು ಮರೆಮಾಜಿ, ವೈದ್ಯರಿಗೆ ಬೇರೆ ಕಾರಣಗಳನ್ನು ಹೇಳುವರು. ಕುಟ್ಟೆಹಿಡಿದ ರಂಧ್ರಗಳಿಗೆ ಬಣ್ಣ ಬಳಿದು ಮೆರಗು ಮಾಡುವ ಔಷಧಿಯಿಂದ ಏನು ಪ್ರಯೋಜನ ? ಅದು ಅಲಂಕಾರ ಪ್ರಾಯವೇ ವಿನಾ ಮತ್ತೇನೂ ಆಗಲಾರದು. ಅನಾರೋಗ್ಯದಿಂದ ನರಳುತ್ತಿರುವವರೆಲ್ಲರೂ ನಿರಾಶರಾಗದೆ ಪ್ರತಿದಿನವೂ ಸ್ವಭಾವಸಿದ್ಧವಾದ ವ್ಯಾಯಾಮವನ್ನು ತೆಗೆದುಕೊಂಡು ಪ್ರಪಂಚದಲ್ಲಿ ತಮ್ಮ ಪಾಲಿಗೆ ಬಂದಿರುವ ಮಹತ್ಕಾರ್ಯಗಳನ್ನು ಮನಃಪೂರ್ವಕವಾಗಿ ಮಾಡಿ ಮುಗಿಸಬೇಕು.

ಆರೋಗ್ಯಸಾಧನೆಗೆ ಶುದ್ಧವಾದ ಗಾಳಿಯೂ, ಶರೀರ ವ್ಯಾಯಾಮವೂ ಅತ್ಯವಶ್ಯ; ಅನೇಕರು ತಮಗಿರುವ ವಿಶೇಷ ಕಾರ್ಯಗಳ ಮಧ್ಯೇ ವ್ಯಾಯಾಮಕ್ಕೆ ಆಸ್ಪದವಿಲ್ಲವೆಂದು ಕೊರಗುವರು. ಆದರೆ, ಜಾರ್ಜ್ ಸ್ಟೀವೆನ್ಸನ್, ವಿಲಿಯಂ ಗ್ಲಾಡ್‌ಸ್ಟನ್ ಮೊದಲಾದ ಪ್ರಖ್ಯಾತ ಪುರುಷರು ಪ್ರತಿ ದಿನವೂ ಅಂಗಸಾಧನೆಯನ್ನು ತೆಗೆದುಕೊಳ್ಳುತ್ತಿದ್ದರು.

ಲಾರ್ಡ್ ಹಾರ್ಡಿಂಜ್, ಯೂಜಿನಿ ಸ್ಯಾಂಡೊ, ಜೇಮ್ಸ್ ವಾಟ್ ಇವರೇ ಮೊದಲಾದ ಪ್ರಸಿದ್ಧ ಪುರುಷರು ಬಾಲ್ಯದಲ್ಲಿ ದುರ್ಬಲರಾಗಿದ್ದರೂ, ವಿರಾಮ ಕಾಲದಲ್ಲಿ ತಪ್ಪದೆ ವ್ಯಾಯಾಮ ಮಾಡತೊಡಗಿ, ಮಹಾಬಲವನ್ನೂ, ಅದರ ದೆಸೆಯಿಂದ ಮೇಧಾಶಕ್ತಿಯನ್ನೂ ಪಡೆದರು. ಇಂತಹ ಉದಾಹರಣೆಗಳು ಇನ್ನೂ ಅನೇಕವಾಗಿವೆ. ರೋಗಿಯಾದ ನರನು ಎಂದಿಗೂ ಅಭಿವೃದ್ಧಿಗೆ ಬರಲಾರನು. ಅಶಕ್ತನಾದ ರೈತನು ಕೃಷಿಕಾರ್ಯವನ್ನು ಕೆಡಿಸುವನು. ನಗರರಕ್ಷಕರು ಬಲಹೀನರಾದರೆ ಗ್ರಾಮವು ಹಾಳಾಗುವುದು. ಮಳೆಗಾಳಿಗಳ ಹೊಡೆತಕ್ಕೆ ತಡೆಯಲಾರದ ನಾವಿಕರಿಂದ ಹಡಗಿನ ಪ್ರಯಾಣ ಕೆಡುವುದು. ನಿತ್ಯರೋಗಿಯಾದ ವರ್ತಕನಿಂದ ವ್ಯಾಪಾರವು ಕೆಡುವುದು. ದುರ್ಬಲರಾದ ಸೈನಿಕರು ಶತ್ರುಗಳಿಗೆ ಹೆದರಬೇಕಾಗುವುದು. ಅಂತೂ ಆರೋಗ್ಯವಿಲ್ಲದವನ ಬಾಳು ಹಾಳಾಗುವುದರಲ್ಲಿ ಸಂಶಯವಿಲ್ಲ. ದೇವರ ಬಲದಿಂದ ಪ್ರಾಣಿಗಳೂ, ತಾಯಿ ತಂದೆಗಳ ಬಲದಿಂದ ಮಕ್ಕಳೂ, ಮಳೆಯ ಬಲದಿಂದ ಬೆಳೆಯೂ, ನ್ಯಾಯದ ಬಲದಿಂದ ನಡೆವಳಿಗಳೂ, ರಾಜನ ಬಲದಿಂದ ಪ್ರಜೆಗಳೂ, ಹೂಗಳ ಬಲದಿಂದ ದುಂಬಿಗಳೂ, ಧನದ ಬಲದಿಂದ ವ್ಯಾಪಾರವೂ, ಕಾಂಕ್ಷೆಯ ಬಲದಿಂದ ವಿದ್ಯೆಯೂ, ಗುರುವಿನ ಬಲದಿಂದ ಶಿಷ್ಯರೂ,

ಬಲವಾದ ಸಾಮಗ್ರಿಗಳ ದೆಸೆಯಿಂದ ಔತಸವೂ ಉಂಟಾಗು ವಂತೆ ಆರೋಗ್ಯದ ಬಲದಿಂದ ಮನುಷ್ಯನ ಸಮಸ್ತ ಕಾರ್ಯ ಗಳೂ ಸರಾಗವಾಗಿ ನೆರವೇರುವವು. ಆದುದರಿಂದ ದೀನದಯಾ ಪರನೂ ಪರೋಪಕಾರಿಯೂ ಆದವನು ಆರೋಗ್ಯವಂತನಾಗಿ ದ್ದರೆ ಲೋಕಹಿತಾರ್ಥವಾದ ಎಷ್ಟೋ ಮಹತ್ಕಾರ್ಯಗಳನ್ನು ಮಾಡಿ ಜಗದ್ವಿಖ್ಯಾತನಾಗಬಹುದು.

---

## ಪ್ರಕರಣ ೪.

### ಕಾರ್ಯತತ್ಪರತೆ—ದೃಢಸಂಕಲ್ಪ.

**ಉದ್ಯೋಗಿನಂ ಪುರುಷಸಿಂಹಮುಪೈತಿ ಲಕ್ಷ್ಮೀಃ**

ಮನುಷ್ಯನು ಕೆಲಸಮಾಡತಕ್ಕ ಪ್ರಾಣಿವರ್ಗಕ್ಕೆ ಸೇರಿದ ವನು. ಸೋಮಾರಿಯಾಗಿರುವುದೆಂದರೆ ಆತನಿಗೆ ಆಗದು. ಆದರೆ ಅನೇಕರು ಮಾಡುವ ಕೆಲಸವನ್ನು ಬಿಟ್ಟು ಮನೆಯಲ್ಲಿ ಮೂದೇವಿಯಂತೆ ಕಾಲಕಳೆಯುವುದೂ, ಅಥವಾ ಕೆಲಸದ ಮಾತನ್ನೆತ್ತಿದರೆ ಕಣ್ಮರೆಯಾಗುವುದೂ ಮನುಷ್ಯನಿಗೆ ತಕ್ಕ ಮರ್ಯಾದೆಯೆಂದು ಭಾವಿಸುವರು. ಪಾಲುಮಾರಿಕೆಯಿಂದ ಪಂಚಲಿಂಗದರ್ಶನವಾಗುವುದಿಲ್ಲ. ಪ್ರಪಂಚದಲ್ಲಿ ಜನ್ಮವೆತ್ತಿದ ಮೇಲೆ ಊರ್ಜಿತ ಸ್ಥಿತಿಗೆ ಬರಬೇಕಾದರೆ ಕಾರ್ಯತತ್ಪರತೆಯು ಅತ್ಯವಶ್ಯಕ. ಇದುವರೆಗೆ ನಮಗೆ ತಿಳಿದುಬಂದಿರುವ ಪ್ರಸಿದ್ಧ ಪುರುಷರೆಲ್ಲರೂ ತಮ್ಮ ಅಭಿವೃದ್ಧಿಯ ಮಾರ್ಗವನ್ನು ತಾವೇ ಸಿದ್ಧಪಡಿಸಿಕೊಂಡರು. ಅವರಿಗೆ ಕೈಗಳೇ ಆಳುಗಳು, ಕಾಲು ಗಳೇ ಕುದುರೆಗಳು, ಮೆದುಳೇ ಮಂತ್ರಿಯು; ಕೆಲಸವು ಮನು ಷ್ಯನಿಗೆ ಲವಲವಿಕೆಯನ್ನು ಕೊಟ್ಟು, ಆತನನ್ನು ದೃಢಾಂಗ

ನನ್ನಾಗಿ ಮಾಡುತ್ತದೆ. ನೈಗಳ್ಳನಾದವನ ಶರೀರವು ಉಪ ಯೋಗಿಸದೆ ಬಿಟ್ಟ ಕಬ್ಬಿಣದಂತೆಯೂ, ನಿಂತೆಡೆಯಲ್ಲಿಯೇ ನಿಂತ ನೀರಿನಂತೆಯೂ, ಕ್ರಮೇಣ ಕೆಟ್ಟುಹೋಗುವುದು. ಮನು ಷ್ಯನಿಗೆ ಸ್ವಭಾವಯೋಗ್ಯವಾದ ಕಾರ್ಯವು ದೊರೆಯದಿದ್ದರೆ ಆತನ ಮನೋವೇಗವು ಇತರ ಹವ್ಯಾಸಗಳ ಕಡೆಗೆ ಚಲಿಸಿ, ದುರಭ್ಯಾಸಗಳು ಆತನನ್ನು ಸೆಳೆಯುತ್ತವೆ. ಅನಂತರ, ಆತ ನಿಗೆ ಅದರ ಸೆಳೆತದಿಂದ ಬಿಡುಗಡೆಯನ್ನು ಹೊಂದಲು ಅತಿ ಶ್ರಮವಾಗುವುದು.

ಕಾರ್ಯತತ್ಪರನಾದವನು ಆನಂದದ ಕಂದನಾಗುವನು. ಆತನಿಂದ ದೇಶೋದ್ಧರಣವು ನಡೆಯುವುದು. ಧನಕನಕವಸ್ತು ವಾಹನಾದಿ ಸಕಲೈಶ್ವರ್ಯಕ್ಕಿಂತಲೂ ತಂದೆಯಾದವನು ಮಕ್ಕ ಳಿಗೆ ಕಾರ್ಯಶೀಲತೆಯನ್ನು ಕಲಿಸುವುದರಿಂದ ವಿಶೇಷ ಸಹಾಯ ಮಾಡಿದಂತಾಗುವುದು. ಜ್ಯೂಲಿಯಸ್ ಸೀಸರ್, ಸರ್ ಫಿರೋಜ್‌ಷಹ ಮೆಹತಾ, ಗೋಖಲೆ, ಸರ್ ದಿನ್‌ಷಾ ವಾಚಾ, ಲಾರ್ಡ್ ಮೆಕಾಲೆ, ಸ್ವಾಮಿ ರಾಮತೀರ್ಥ, ರವೀಂದ್ರನಾಥ ಠಾಕೂರ್, ಬಾಬರ್, ವಿಲಿಯಂ ಪಿಟ್, ಗ್ಲಾಡ್‌ಸ್ಟನ್ ಮೊದ ಲಾದ ಮಹನೀಯರು ಕಾರ್ಯತತ್ಪರತೆಯ ಪ್ರಭಾವದಿಂದ ಉನ್ನತ ಪದವೀಧರರಾಗಿಯೂ, ಧರ್ಮಕಾರ್ಯನಿರತರಾಗಿಯೂ ಪ್ರಕಾಶಗೊಂಡಿರುವರು. ಜ್ಯೂಲಿಯಸ್ ಸೀಸರ್ ಎಂಬುವನು ಹಿಂದೆ ನಾಗರೀಕತೆಯ ಪ್ರಥಮ ಸ್ಥಾನವನ್ನು ಪಡೆದಿದ್ದ ರೋ ಮನ್ ಜನರಲ್ಲೆಲ್ಲಾ ಅತ್ಯಂತ ಶೂರನೂ, ರಣಧೀರನೂ ಆಗಿ, ಸಮಯ ದೊರೆತಾಗಲೆಲ್ಲಾ ದೇಶಭಾಷೆಯಲ್ಲಿ ವ್ಯಾಕರಣಶಾಸ್ತ್ರ, ಚರಿತ್ರೆ, ಜ್ಯೋತಿಷ ಇವೇ ಮೊದಲಾದ ಗ್ರಂಥಗಳನ್ನು ಕಷ್ಟ ಪಟ್ಟು ರಚಿಸಿದನು. ಸರ್ ದಿನ್‌ಷಾ ವಾಚಾರವರು ತಮ್ಮ ಎಪ್ಪ

ತ್ತನೆಯ ವರ್ಷವು ಕಳೆದ ಮೇಲೆ ಮುರಾರಜೀ ಗೋಕುಲ ದಾಸ್ ಮತ್ತು ಸೋಲಾಪುರ ಕಾರ್ಖಾನೆಗಳ ಪ್ರಸಿದ್ಧ ಪಾರು ಪತ್ಯಗಾರರಾಗಿದ್ದರು. ವಿಕ್ಟೋರಿಯಾ ಟೆಕ್ನಿಕಲ್ ಇಸ್ಟಿ ಟ್ಯೂಟಿನ ಸಭಾಸದರಾಗಿ ಬಹಳ ಮೆಹನತ್ತಿನಿಂದ ಕೆಲಸ ಮಾಡಿದರು. ಬೊಂಬಾಯಿನ ರಾಷ್ಟ್ರೀಯ ಕಾಂಗ್ರೆಸ್ ಕಮಿ ಟಿಯ ಮೆಂಬರಾಗಿದ್ದರು. ಬೊಂಬಾಯಿನ ಮ್ಯುನಿಸಿಪಲ್ ಕಾರ್ಪೊರೇಷನ್ನಿನ ಸದಸ್ಯರಾಗಿದ್ದರು. ಇಂಪೀರಿಯಲ್ ಟ್ರಸ್ಟ್ ಬೋರ್ಡು, ಬೊಂಬಾಯಿನ ನ್ಯಾಯವಿಧಾಯಕ ಸಭೆ ಇವುಗಳ ಸದಸ್ಯರಾಗಿ ಕೀರ್ತಿಯನ್ನು ಪಡೆದರು. ಲಾರ್ಡ್ ಮೆಕಾಲೆ ಎಂಬ ಆಂಗ್ಲೇಯ ಮಹನೀಯನು ಬಾಲ್ಯದಿಂದಲೂ ಒಲೆ ಯಲ್ಲಿ ಉರಿಯುವ ಬೆಂಕಿಯ ಬೆಳಕಿನಲ್ಲಿ ವಿದ್ಯಾಭ್ಯಾಸ ಮಾಡಿ ಕಡೆಗೆ ಸುಪ್ರಸಿದ್ಧ ಚರಿತ್ರಕಾರನೆನಿಸಿಕೊಂಡನು. ಸ್ವಾಮಿ ರಾಮತೀರ್ಥರವರು ಅಮೇರಿಕಕ್ಕೆ ಹೋದ ಕೆಲವು ವರ್ಷಗಳೊ ಳಗಾಗಿ ತಮಗಿದ್ದ ಅನೇಕ ಕಾರ್ಯಗಳ ನಡುವೆ ವಿರಾಮ ವನ್ನು ತೆಗೆದುಕೊಂಡು, ವಿಶೇಷ ಶ್ರಮದಿಂದ ಅಲ್ಲಿನ ದೇಶೀಯ ಸಾಹಿತ್ಯದಲ್ಲಿ ಪೂರ್ಣ ಪಾಂಡಿತ್ಯವನ್ನು ಪಡೆದರು. ಬಾಬರನು ತನಗಿದ್ದ ಕಾರ್ಯಕುತೂಹಲದ ದೆಸೆಯಿಂದ ಯುದ್ಧಾಂಗಣ ದಲ್ಲಿಯೂ ಚರಿತ್ರೆಯನ್ನು ಬರೆಯುತ್ತಿದ್ದನು. ವಿಲಿಯಂ ಪಿಟ್ ಎಂಬ ಇಂಗ್ಲೆಂಡಿನ ಸುಪ್ರಸಿದ್ಧ ಸಚಿವವರೇಣ್ಯನು ಚಿಕ್ಕಂದಿನಿಂ ದಲೂ ಕಷ್ಟಪಟ್ಟು ಕೆಲಸಮಾಡಿ ತನ್ನ ತಂದೆಯಂತೆಯೇ ತಾನೂ "ಪಾರ್ಲಿಮೆಂಟ್" ಮಂತ್ರಾಲೋಚನಾ ಸಭೆಯಲ್ಲಿ ಪ್ರಸಿದ್ಧ ಶಾಸನಕರ್ತನೂ ವಾಗ್ವೈಖರಿಯುಳ್ಳವನೂ ಆದನು. ಹೀಗೆ ಈ ಮಹನೀಯರು ತಮ್ಮ ಜೀವಮಾನವನ್ನೆಲ್ಲಾ ಯಾವು ದಾದರೂ ಕೆಲಸಮಾಡುವುದರಲ್ಲಿಯೇ ಕಳೆಯುವಂತೆ ಮಾಡಿ

ದುದು ಅವರಿಗಿದ್ದ ಅತ್ಯುನ್ನತ ಕಾರ್ಯಕುತೂಹಲವಲ್ಲದೆ ಮತ್ತಾವುದೂ ಅಲ್ಲ.

ಆದರೆ, ಅವರಲ್ಲಿ ಮತ್ತೊಂದು ಅತಿಶಯವಾದ ಗುಣವು ತೋರಿಬರುತ್ತದೆ. ಅದು ದೃಢಸಂಕಲ್ಪ. ಸಂಕಲ್ಪಸಾಧನೆಗಾಗಿ ಅವರು ಯಾವ ವಿಧವಾದ ಆತಂಕವನ್ನಾದರೂ ನಿಗ್ರಹಿಸಬಲ್ಲವರಾಗಿದ್ದರು. ಬೇಕರ್ ಎಂಬ ಆಂಗ್ಲೇಯ ಗ್ರಂಥಕಾರನು ತರ್ಕಶಾಸ್ತ್ರವನ್ನು ಹನ್ನೆರಡುಸಾರಿ ಬರೆದನು. ಗಿಬ್ಬನ್ ಎಂಬ ಆಂಗ್ಲೇಯ ಚರಿತ್ರಕಾರನು ರೋಮನ್ ಚಕ್ರಾಧಿಪತ್ಯದ ಚರಿತ್ರೆಯನ್ನು ಇಪ್ಪತ್ತು ವರ್ಷಗಳವರೆಗೆ ಬರೆದನು. ಗೋಲ್ಡ್‌ಸ್ಮಿತ್ ಎಂಬ ಆಂಗ್ಲೇಯ ಕವಿಯು "ಡೆಸರ್ಟೆಡ್ ವಿಲೇಜ್" ಎಂಬ ಕಾವ್ಯವನ್ನು ಏಳು ವರ್ಷಗಳ ಕಾಲ ಬರೆದನು. ಜಾರ್ಜ್ ಸ್ಟೀಫನ್ ಸನ್ ಎಂಬ ಸುಪ್ರಸಿದ್ಧ ಯಂತ್ರನಿರ್ಮಾಪಕನು ತನ್ನ "ಲೋಕೊಮೊಟಿವ್" ಎಂಬ ಯಂತ್ರವನ್ನು ಹದಿನೈದು ವರ್ಷಗಳ ಶ್ರಮದಿಂದ ತಯಾರುಮಾಡಿದನು. ಹಾರ್ವೆ ಎಂಬ ಶಾರೀರಶಾಸ್ತ್ರಜ್ಞನು ರಕ್ತಪರಿಚಲನೆಯನ್ನು ಕಂಡುಹಿಡಿಯಲು ಎಂಟು ವರ್ಷಗಳ ಕಾಲ ತೊಳಲಿಬಳಲಿದನು. ಕೊಲಂಬಸ್ ಎಂಬ ಸುಪ್ರಸಿದ್ಧ ನಾವಿಕನು ತನ್ನ ದೃಢಸಂಕಲ್ಪದ ಬಲದಿಂದ ಅಡ್ಡಬಿದ್ದ ತೊಡಕುಗಳನ್ನೆಲ್ಲಾ ಪರಿಹರಿಸಿಕೊಂಡು, ಆಗಿನ ಕಾಲದ ಜನರು ಕನಸಿನಲ್ಲಿಯೂ ಕಂಡರಿಯದೆ ಇದ್ದ ಅಮೇರಿಕ ಖಂಡವನ್ನು ಕಂಡು ಹಿಡಿದನು. ಇದಲ್ಲವೇ ಸಂಕಲ್ಪಸಾಧನೆ? ಡೆಮಾಸ್ತನೀಸ್ ಎಂಬ ಅತಿ ಚತುರನಾದ ವಾಗ್ಮಿಯು ಮೊತ್ತಮೊದಲು ಸಭಾಸದರಿದಿರಿಗೆ ಮಾತನಾಡುವುದೆಂದರೆ ಭಯದಿಂದಲೂ, ತೊದಲಿನಿಂದಲೂ ನಡಗುತ್ತಿದ್ದನು. ಈತನಿಗೆ ತಾನೂ ವಾಗ್ಮಿಯಾಗಬೇಕೆಂಬ ಆಸೆಯುಂಟಾಯಿತು. ಇದಕ್ಕಾಗಿ

ಈತನು ಒಂದು ಗುಹೆಯನ್ನೇರ್ಪಡಿಸಿಕೊಂಡು, ಅರ್ಧ ಮುಖಕ್ಕೆ ಕ್ಷೌರವನ್ನು ಮಾಡಿಸಿ, ಆ ಗುಹೆಯಲ್ಲಿಯೇ ಅನೇಕ ಕಾಲದ ವರೆಗೆ ವ್ಯಾಸಂಗಮಾಡಿದನು. ಅನಂತರ ಸಮುದ್ರ ತೀರಕ್ಕೆ ಬಂದು ಬಾಯೊಳಗೆ ಒಂದೆರಡು ಸಣ್ಣ ಕಲ್ಲುಗಳನ್ನು ಹಾಕಿ, ಭೋರ್ಗರೆಯುವ ತರಂಗಧ್ವನಿಯಲ್ಲಿ ತಾನು ಗಟ್ಟಿಯಾಗಿ ಮಾತನಾಡುತ್ತ, ಕಡೆಗೆ ಅಪ್ರತಿಮವಾಗ್ಮಿಯೆನಿಸಿಕೊಂಡನು.

ಅಮೇರಿಕದ ಸಂಯುಕ್ತಸಂಸ್ಥಾನದ ಪ್ರೆಸಿಡೆಂಟರಾಗಿದ್ದ ಏಬ್ರಹಾಮ್ ಲಿಂಕರ್ನರವರು ತಮ್ಮ ಅಭಿಪ್ರಾಯಗಳನ್ನು ಪ್ರತಿವಾದಿಗಳ ಇದಿರಿಗಾದರೂ ಘಂಟಾಘೋಷವಾಗಿ ಹೇಳಿ, ಜನರ ಅಪವಾದಗಳಿಗೆ ಹೆದರದೆ ಕೆಲಸಮಾಡುತ್ತ, ಕಡೆಗೆ ದೃಢಸಂಕಲ್ಪದಿಂದ ಅತಿಹೇಯವಾದ ಗುಲಾಮರ ಮಾರಾಟವನ್ನು ತಪ್ಪಿಸಿದರು. ಪ್ರಖ್ಯಾತರಾದ ಜೇಮ್ಸೆಟ್‌ಜಿ ಎನ್. ತಾತಾರವರು ತಮ್ಮ ಆತಂಕಗಳೆಲ್ಲವನ್ನೂ ನಿಗ್ರಹಿಸಿಕೊಂಡು ಬಂದುದರಿಂದಲೇ, ಮುಂದೆ ದೊಡ್ಡ ದೊಡ್ಡ ಕಾರಖಾನೆಗಳನ್ನು ಸ್ಥಾಪಿಸಲು ಶಕ್ತರಾದರು. ವಿದ್ಯಾರ್ಥಿಗಳಿಗೆ ತಕ್ಕ ಮತ್ತೊಂದು ಉದಾಹರಣೆಯನ್ನು ಇಲ್ಲಿ ಕೊಡುವೆವು. ಪ್ರೊಫೆಸರ್ ಮೂರ್ ಎಂಬ ವಿದ್ಯಾವಂತನು ನ್ಯೂಟನ್ನನು ಬರೆದ "ಪ್ರಿನಿಸಿಪಿಯ" ಎಂಬ ಗ್ರಂಥವನ್ನು ಕೊಂಡುಕೊಳ್ಳಲು ಹಣವಿಲ್ಲದೆ ಪುಸ್ತಕವನ್ನು ಮತ್ತೊಬ್ಬರಿಂದ ತಂದು ಕೆಲವು ದಿವಸಗಳಲ್ಲಿಯೇ ಅದರ ಪ್ರತಿಯೊಂದನ್ನು ತಾನೇ ಬರೆದನಂತೆ! ಇದಲ್ಲವೇ ನಿಜವಾದ ಪ್ರತಿಜ್ಞಾಬದ್ಧತೆ?

ಎಡರಡಸುವುದೆಂದಂಜುತೆ।
ತೊಡಗರ್ ಕಾರ್ಯಮನೆ ನೀಚರೆಡರಡಸಲೊಡಂ॥

ಬಿಡುವರ್ ಮಧ್ಯಮರೆಡರೆನಿ।
ತಡಸಿದೊಡಂ ತ್ಯಜಿಸರಾಂತ ಕೃತ್ಯವ ಧೀರರ್॥

ಮೇಲೆ ಹೇಳಿದ ಮಹಾತ್ಮರು ತೊಂದರೆಗಳಿಗೆ ಹೆದರಲಿಲ್ಲ. ದಾರಿಯಲ್ಲಿ ನಡೆವವನಿಗೆ ಕಲ್ಲು ಮುಳ್ಳುಗಳು ಸಿಕ್ಕುವುದುಂಟು. ಆದರೆ ಅವುಗಳನ್ನು ತಪ್ಪಿಸಿಕೊಂಡು ನಡೆಯದೆ ಎಡಹುವುದಾಗಲಿ, ತುಳಿಯುವುದಾಗಲಿ, ಸರಿಯಾದುದಲ್ಲ. ಕಷ್ಟಗಳು ಎಂದಿಗೂ ಮನುಷ್ಯನನ್ನು ಹಾಳುಮಾಡಲು ಬರುವುದಿಲ್ಲ. ಅವು ಆತನ ಸಾಮರ್ಥ್ಯವನ್ನು ನಿರ್ಣಯಿಸುವುದಕ್ಕೆ ಭಗವಂತನು ಕಳುಹಿಸುವ ಪರೀಕ್ಷಕರೆಂದು ಭಾವಿಸಬೇಕು. ಪರೀಕ್ಷಕರ ರಹಸ್ಯವು ವಿದ್ಯಾರ್ಥಿಗಳಿಗೆ ಚೆನ್ನಾಗಿ ಗೊತ್ತಿರಬಹುದು. ಅವರು ತಮ್ಮ ವಿದ್ಯಾಭ್ಯಾಸ ಕಾಲದಲ್ಲೆಲ್ಲಾ ಇಂತಹ ಪರೀಕ್ಷಕರನೇಕರ ಸೂಕ್ಷ್ಮದೃಷ್ಟಿಯಲ್ಲಿ ಸಾಗಬೇಕಾಗಿದೆ. ಈ ಪರೀಕ್ಷಕರು ಅನೇಕ ವೇಳೆ ವಿದ್ಯಾರ್ಥಿಗಳ ಇದಿರಿಗೆ ಇರುವುದಿಲ್ಲ. ಆದರೆ ಮೇಲೆ ಹೇಳಿದ ಆತಂಕಗಳೆಂಬ ಪರೀಕ್ಷಕರು ಮಾತ್ರ ಮನುಷ್ಯನ ಇದಿರಿಗೆ ನಿಂತು ಪ್ರತಿಭಟಿಸುವರು. ಅವರನ್ನು ಜಯಿಸುವವನೇ ಧೀರನು, ಆತನೇ ಜಗದ್ವಿಖ್ಯಾತನು, ಆತನೇ ಕೀರ್ತಿಕೋವಿದನು.

ಹತಾಶನಾಗಬಾರದು. ದೂರದೃಷ್ಟಿಯಿಂದ ಕ್ಷಣಿಕವಾದ ಕಷ್ಟನಷ್ಟಗಳನ್ನು ಮರೆತು ಸುಖಕ್ಕೆ ತಕ್ಕ ದಾರಿಯನ್ನು ಹಿಡಿದು ನಡೆದ ಜನರು ತಮ್ಮ ಮನದೆಣಿಕೆಯನ್ನು ತೀರಿಸಿಕೊಳ್ಳಬೇಕು. ಕನಸಿನಲ್ಲಿಯೂ ಅಭಿವೃದ್ಧಿಯನ್ನೇ ಕೋರುತ್ತಿರುವುದರಿಂದ ಮನುಷ್ಯನು ತನ್ನದಾರಿದ್ರ್ಯವನ್ನು ಸ್ವಲ್ಪಮಟ್ಟಿಗಾದರೂ ಮರೆಯುವನು. ಪ್ರತಿದಿನವೂ ಕೂಡಿದಮಟ್ಟಿಗೆ ಉತ್ತಮಕಾರ್ಯಗಳಲ್ಲಿ ಕೈಹಾಕುವುದರಿಂದ ಮಾನವನು

ಉನ್ನತಸ್ಥಿತಿಗೆ ಬರಬಹುದು. ಪ್ರಪಂಚವು ಕಷ್ಟಪಟ್ಟವರಿಗೆ ಮೃಷ್ಟಾನ್ನವನ್ನು ಕೊಡುತ್ತದೆ. ಅಳುವವನಿಗೆ ಅನಿಷ್ಟವನ್ನುಂಟುಮಾಡುತ್ತದೆ. ಆಸ್ತಿಕತನವು ಅತ್ಯುತ್ತಮವಾದುದು. ಪ್ರಕೃತಿಸೌಂದರ್ಯವನ್ನು ನೋಡಿ ಸಂತೋಷಪಡುವುದರಿಂದಲೂ, ಸಂಗೀತವನ್ನು ಮನದಣಿಯುವಂತೆ ಕೇಳುವುದರಿಂದಲೂ, ಜನರು ಯಾವಾಗಲೂ ಆಹ್ಲಾದದಿಂದ ಕೂಡಿದವರಾಗಿ, ಅವರ ಆಲೋಚನೆಯು ಅಭಿವೃದ್ಧಿಮಾರ್ಗದ ಕಡೆಗೆ ತಿರುಗುವದು. ಆಗ ತನ್ನ ಹೀನಸ್ಥಿತಿಯನ್ನು ಮರೆತು ದೃಢಸಂಕಲ್ಪದಿಂದ ಮುಂದುವರಿಯುವ ಜ್ಞಾನವು ಹುಟ್ಟುವುದು.

ಬುದ್ಧಿಶಾಲಿಗಳು ಯಾವ ಕೆಲಸವನ್ನಾದರೂ ಧೈರ್ಯದಿಂದ ಹಿಡಿದು ಸಾಧಿಸುವರು. ಕಡೆಗೆ ಅದು ಅವರ ವಶವಾಗುವುದು. ಅವರು ತಮ್ಮ ತಮ್ಮ ಕೆಲಸಗಳಲ್ಲಿ ಪರಿಣತರಾಗುವರು. ನಾಯಿಂದನೇ ಆಗಲಿ, ಅಗಸನೇ ಆಗಲಿ, ತನ್ನ ಕೆಲಸಗಳನ್ನು ಮನಃಪೂರ್ವಕವಾಗಿ ಮಾಡುವುದರಿಂದ ಆತನಿಗೆ ಸುಖ ಸೌಭಾಗ್ಯಗಳು ಒದಗುವುವು. ಕೆಲಸವು ತಮ್ಮ ಮರ್ಯಾದೆಗೆ ತಕ್ಕುದಲ್ಲವೆಂದಾಗಲಿ, ಕೆಲಸದಲ್ಲಿ ಆತಂಕಗಳುಂಟೆಂದಾಗಲಿ ಮೊದಲೇ ಭಾವಿಸಿ, ಅನೇಕರು ಯಾವ ಕೆಲಸಗಳಿಗೂ ಕೈಹಾಕುವುದೇ ಇಲ್ಲ. ಇವರ ಹುಚ್ಚಿಗೆ ಮದ್ದು ಎಲ್ಲಿ ದೊರೆಯುವುದೋ ಕಾಣೆವು. ಪ್ರಪಂಚದಲ್ಲಿ ನಷ್ಟಭಾಗಿಗಳಾಗದೆ, ಅಥವಾ ಕಷ್ಟಕ್ಕೀಡಾಗದೆ ಯಾರೂ ಜಯಶೀಲರಾಗುವುದಿಲ್ಲ. ಹೀಗಿರುವಲ್ಲಿ, ಕೆಲಸಮಾಡುವುದಕ್ಕೆ ಹೆದರುವುದೆಂದರೆ ಹುಚ್ಚಲ್ಲವೇ? ಯಾರೇ ಆಗಲಿ ದೃಢಸಂಕಲ್ಪದಿಂದ ಕೆಲಸಮಾಡತೊಡಗಿದರೆ ಮೇರು ಪರ್ವತವನ್ನಾದರೂ ನುಚ್ಚುನುರಿಯಾಗಿ ಮಾಡಿ ಉರುಳಿಸಬಹುದು.

ಹಿಡಿದ ಕೆಲಸವು ಕೆಟ್ಟುಹೋಯಿತೆಂದು ಅನೇಕರು ಅಲ್ಲಿಯೇ ತಟಸ್ಥರಾಗಿ ನಿಲ್ಲುವುದುಂಟು. ವ್ಯಾಪಾರಗಾರರೂ, ವಿದ್ಯಾರ್ಥಿಗಳೂ ಅನೇಕವೇಳೆ ಹೀಗೆ ಮನಸೋತು, ತಮ್ಮ ಜೀವಮಾನವನ್ನು ಹಾಳುಮಾಡಿಕೊಳ್ಳುತ್ತಾರೆ. ಒಮ್ಮೆ ಕೆಲಸವು ಕೆಟ್ಟುಹೋಯಿತೆಂದು ಹೆದರಿ ಮತ್ತೊಮ್ಮೆ ಪ್ರಯತ್ನಿಸದಿರುವುದು ಕೇವಲ ಹೇಡಿತನ. ನಡೆದು ಹೋದ ಕಾರ್ಯಕ್ಕೆ ನಡುಗಿ ಪ್ರಯೋಜನವಿಲ್ಲ. ಕೈಬಿಟ್ಟುಹೋದ ಕೆಲಸವನ್ನು ಮರಳಿ ಮಾಡತೊಡಗುವುದು ಅವಮಾನಕರವಲ್ಲ. ಅಂತಹ ಪುರುಷನನ್ನು ಎಲ್ಲರೂ ಹೊಗಳುವರು. ಆತನ ಸಾಹಸವನ್ನು ಎಲ್ಲರೂ ಮೆಚ್ಚುವರು. ಅಮೇರಿಕದ ಸಂಯುಕ್ತಸಂಸ್ಥಾನದಲ್ಲಿ ಹುಟ್ಟಿ ಬಾಳಿದ ಪ್ರೆಸಿಡೆಂಟು ಏಬ್ರಹಾಮ್ ಲಿಂಕನ್‌ರವರು ತಮಗೆ ಒದಗಿದ ಅನೇಕ ತಾಪತ್ರಯಗಳಿಗೆ ಹೆದರಿದ್ದರೆ ಪ್ರಬಲರಾದ ಇದಿರಾಳುಗಳನ್ನು ಜಯಿಸಿ ಪ್ರೆಸಿಡೆಂಟರ ಪದವಿಗೆ ಬರುತ್ತಿರಲಿಲ್ಲ.

ನಾವು ಮಾಡುವ ಕೆಲಸಗಳೆಲ್ಲವೂ ದೈವನಿಯಾಮಕವಾದುವುಗಳು. ದಂಡಕಾರಣ್ಯದಂತೆ ಒರಟುಮುರುಟಾಗಿದ್ದ ಈ ಭೂಮಿಯನ್ನು ವ್ಯವಸಾಯದಿಂದ ಮನೋಹರವಾಗುವಂತೆ ಮಾಡಲು ಜೀವರಾಶಿಯನ್ನು ಭಗವಂತನು ಉತ್ಪತ್ತಿ ಮಾಡಿದನು. ಒಂದೊಂದು ಜೀವಿಗೂ ಅದಕ್ಕನುಗುಣವಾದ ಕೆಲಸವನ್ನು ಆತನೇ ಈ ಭೂಲೋಕದಲ್ಲಿ ಕಲ್ಪಿಸಿರುವನು. ಆ ಕೆಲಸವನ್ನೇ ನಾವು ಜೀವನೋಪಾಯವೆಂದು ಕರೆಯುತ್ತೇವೆ. ಒಂದು ದೇಶದ ಸಂಪತ್ತು ನಾನಾ ಮಾರ್ಗಗಳಿಂದ ಅಭಿವೃದ್ಧಿ ಹೊಂದುತ್ತದೆ. ಈ ಸಂಪದಭ್ಯುದಯಕ್ಕೆ ಸಹಕಾರಿಯಾಗಿ ಪ್ರತಿ ಜೀವಿಯೂ ಕೆಲಸ ಮಾಡುತ್ತದೆ. ಮಾಡುವ ಕೆಲಸವು

ಅತ್ಯಲ್ಪವಾದರೂ ಅದನ್ನು ಮಾಡದೆ ಬಿಡಬಾರದು. ಸೋಮಾರಿಯಂತೆ ಕುಳಿತಿರುವ ಗುಣವನ್ನು ದೇವರು ಯಾವ ಪ್ರಾಣಿಗೂ ಕೊಟ್ಟಿಲ್ಲ. ಆದರೆ ಸೋಮಾರಿತನವು ಸಹವಾಸದಿಂದಲೂ, ಪೋಷಣೆಯಿಂದಲೂ ಮನುಷ್ಯನನ್ನು ಹಿಡಿಯುವುದು. ತಾಯಿ ತಂದೆಗಳು ಮಕ್ಕಳಿಗೆ ತಕ್ಕ ಕೆಲಸಗಳನ್ನು ಕಲಿಸಿಕೊಡಬೇಕು. ಮಕ್ಕಳನ್ನು ಒಳ್ಳೆಯವರ ಸಹವಾಸದಲ್ಲಿಟ್ಟಿರಬೇಕು. ವಿಶೇಷ ಪೋಷಣೆಯಿಂದ ಮುದ್ದಾಡಿದ ಮಾತ್ರಕ್ಕೆ ಮಕ್ಕಳು ಕಾರ್ಯಶೀಲರಾಗುವುದಿಲ್ಲ. ಚಿಕ್ಕ ಚಿಕ್ಕ ಕೆಲಸಗಳನ್ನು ಮನಃಪೂರ್ವಕವಾಗಿ ಮಾಡಿದರೆ ಭಗವಂತನು ಮೆಚ್ಚಿ, ಇನ್ನೂ ಅತಿಶಯವಾದ ಕೆಲಸಗಳಿಗೆ ನಮ್ಮನ್ನು ತಂದುಬಿಡುವನು. ಹೀಗೆ ದುರ್ಗಮವಾದ ದಂಡಕಾರಣ್ಯವು ಮನುಷ್ಯ ಪ್ರಯತ್ನದಿಂದ ಮನೋಹರವಾದ ಪೈರುಪಚ್ಚೆಗಳಿಂದ ಕೂಡಿದ ಸೊಂಪಾದ ಭೂಮಿಯಾಗುವದು. ಹಳ್ಳಿಯು ಪಟ್ಟಣವಾಗುವುದು. ಅನಾಗರಕತೆಯು ತೊಲಗಿ ನಾಗರಕತೆಯು ಎಲ್ಲೆಲ್ಲಿಯೂ ಹರಡುವುದು. ಹಿಂದೆ ಕನಸಿನಲ್ಲಿಯೂ ಕಾಣದಿದ್ದ ರೈಲೂ, ಫಿರಂಗಿಗಳೂ, ಗಡಿಯಾರಗಳೂ, ಆಶ್ಚರ್ಯವನ್ನುಂಟುಮಾಡುವ ವಿಮಾನಗಳೂ, ಇನ್ನೂ ನಾನಾ ಚಿತ್ರವಿಚಿತ್ರ ವಸ್ತುಗಳೂ ಪ್ರಾಣಿಗಳ ಕಾರ್ಯಕುತೂಹಲದ ಪ್ರಭಾವದಿಂದಲೂ ಭಗವಂತನ ಅನುಗ್ರಹದಿಂದಲೂ ಉಂಟಾದ ಫಲಗಳಾಗಿವೆ. ಸೋಮಾರಿಗೆ ಯಾವುದೂ ಸಾಧ್ಯವಿಲ್ಲ.

ತುದಿಗೆಯ್ದುದುದಂ ಫಲವಿ |
ಲ್ಲದುದಂ ಪಳಿಗೀಡುಮಾಳ್ಪುದಂ ಪರಸಂತಾ ||
ಪದಮಂ ಪರಗತಿವಿಲಯಾ |
ಸ್ಪದಮಂ ಕಾರ್ಯಮನುದಾರವೃತ್ತಿ ನೆಗಳ್ದಪನೇ ||

ಎಂದು ನೀತಿಸಾರವು ಸಾರುತ್ತದೆ. ಯಾವ ಕೆಲಸವನ್ನೂ ಮಧ್ಯೇ ನಿಲ್ಲಿಸಬಾರದು. ಅದರಿಂದ ತನ್ನ ಶ್ರಮಕ್ಕೆ ಯಾವ ಪ್ರಯೋಜನವೂ ಉಂಟಾಗಲಾರದು. ಅನೇಕ ಕೆಲಸಗಳನ್ನು ಒಂದೇಸಾರಿ ಮಾಡಲೆಳಸುವುದು ತಪ್ಪು. ಹಿಡಿದ ಒಂದು ಕೆಲಸವನ್ನು ಸಂಪೂರ್ಣವಾಗಿ ಮಾಡಿದರೆ, ಆಗ ಶ್ರಮವು ಸಾರ್ಥಕವಾಗುವುದು. ಯಾವಾಗಲೂ ಕೆಲಸಮಾಡಲು ಕುತೂಹಲಭರಿತನಾಗಿರಬೇಕು. ಅಡಚಣೆಗಳಿಗಾಗಿ ಹೆದರಬಾರದು. ಸರಿಯಾದ್ದ ಕಾಲವಿಲ್ಲವೆಂದು ಕೊರಗಬಾರದು. ನಾನೊಬ್ಬನೇ ಮಾಡಬೇಕೆಂದು ಹೆದರಿ, ಭಗವಂತನ ಆಜ್ಞೆಯನ್ನು ಮೀರಿ, ಭೂಮಿಗೆ ಹೊರೆಯಾಗಿ ಸೋಮಾರಿಯಂತೆ ಕಾಲಹರಣ ಮಾಡಬಾರದು. ಎಲ್ಲಿ ಕೆಲಸಮಾಡಲು ಆಸ್ಪದವಿದೆಯೋ ಅಲ್ಲಿ ಧೈರ್ಯದಿಂದಲೂ, ಸಂತೋಷದಿಂದಲೂ, ಪರಿಣಾಮಫಲವನ್ನು ಯೋಚಿಸಿ ಕೆಲಸ ಮಾಡಬೇಕು. ಇದರಿಂದ ಯಾರೇ ಆಗಲಿ ಅಭಿವೃದ್ಧಿಗೆ ಬರುವುದರಲ್ಲಿ ಸಂದೇಹವಿಲ್ಲ.

---

## ಪ್ರಕರಣ ೫

### ಬಡತನ—ಆತ್ಮಾವಲಂಬನೆ.

**ಪುರುಷಾರ್ಥಂಗೆಯ್ಯುತ್ತಿರೆ ।**
**ಪರಮಾರ್ಥಂ ದೈವಮುಂ ಕೃತಾರ್ಥನ ಮಾಳ್ಕುಂ ॥**

ಮನುಷ್ಯನು ಮಾಡುವ ಸರ್ವ ಪ್ರಯತ್ನಗಳಿಗೆಲ್ಲಾ ಅಗಾಧವಾದ ಅಡಚಣೆಗಳನ್ನು ಬಡತನವು ತಂದೊಡ್ಡುವುದೆಂದು ಅನೇಕರು ಭಾವಿಸುವರು. ಈ ಬಡತನದ ದೆಸೆಯಿಂದ ತಾವು ಅಭಿವೃದ್ಧಿಯನ್ನೈದಲು ಆಗಲಿಲ್ಲವೆಂದು ಜನರು ಪದೇ ಪದೇ

ಹೇಳುವುದುಂಟು. ಇವರ ಜಾಣ್ಮೆಯು ನುಡಿಯು ಕೇವಲ ಹಾಸ್ಯಾಸ್ಪದವಾದುದೇ ಸರಿ. ಬಡತನದಲ್ಲಿ ಜನಿಸುವುದು ಬಹಳ ಹಿತಕರವಾದುದೆಂಬ ವಿಷಯವನ್ನು ಇವರು ಮರೆತು ಬಿಡುತ್ತಾರೆ. ಇದರಿಂದಲೇ ಪ್ರಖ್ಯಾತನಾದ ಡ್ರೈಡನ್ ಕವಿಯು ಹೀಗೆ ಹೇಳಿರುವನು,

Want is a better and hateful good
Because its virtues are not understood.

ಬಡತನದ ಸದ್ಗುಣಗಳನ್ನು ಜನರು ಅರಿತಿಲ್ಲವೆಂದು ಈತನು ಹೇಳುವನಲ್ಲವೇ ? ಈತನ ಮಾತುಗಳು ಸರ್ವಸಮ್ಮತವಾದುವು. ತಾಯಿ ತಂದೆಗಳಿಂದ ಮಕ್ಕಳು ಪಡೆಯಬಹುದಾದ ನಿಧಿನಿಕ್ಷೇಪಗಳೆಲ್ಲಕ್ಕಿಂತಲೂ ದಾರಿದ್ರ್ಯವು ಬಹಳ ಕ್ಷೇಮಕಾರಿ ; ಉನ್ನತಪದವಿಗೆ ಬಂದು, ಪ್ರಖ್ಯಾತರೆನಿಸಿಕೊಂಡು ಬಾಳಿದ ಮತ್ತು ಬಾಳುತ್ತಿರುವ ಅನೇಕ ಮಹನೀಯರ ಜೀವನ ಚರಿತ್ರೆಗಳನ್ನು ಓದಿ ನೋಡಿದರೆ, ಈ ವಿಷಯವು ಸ್ಪಷ್ಟವಾಗುವುದು. ಅಮೇರಿಕದ ಜೇಮ್ಸ್ ಏಬ್ರಾಮ್ ಗಾರ್ಫೀಲ್ಡ್, ಏಬ್ರಹಾಮ್ ಲಿಂಕನ್, ಇಂಗ್ಲೆಂಡಿನ ಲಾರ್ಡ್ ರೀಡಿಂಗ್, ರಾಂಸೆ ಮೆಕ್ಡೊನಾಲ್ಡ್, ಭರತಖಂಡದ ಗೋಪಾಲಕೃಷ್ಣ ಗೋಖಲೆ, ತಿಲಕ, ಬೆಹರಾಂಜಿ ಮಲಬಾರಿ, ಮೊದಲಾದ ಮಹನೀಯರು ಕೇವಲ ಬಡತನದಲ್ಲಿ ಜನಿಸಿದವರು. ಆದರೆ ಇವರಿಗೆ ಬಡತನವು ಮಾಡಿದ ಹಿತೋಪದೇಶವಾವುದು ? ಆ ಹಿತೋಪದೇಶವೇ ಆತ್ಮಾವಲಂಬನೆ. ಸಾಮಾನ್ಯವಾಗಿ ಹಣವಂತರು ಹುಟ್ಟುತ್ತ ಪರಾಧೀನರಾಗಿ ಪ್ರಪಂಚದ ಬೆಳಕನ್ನು ಕಾಣುವರು. ಪರಾಧೀನತೆಯು ಬಹಳ ಸೊಂಪಾದುದು. ತಾನು ದುಡಿಯಬೇಕಾದುದಿಲ್ಲ. ಬೇಕಾದಷ್ಟು ಪಿತ್ರಾರ್ಜಿತ

ವಾದ ಆಸ್ತಿಯಿದ್ದರೆ, ಸುಖವಾಗಿ ಬಾಳಬಹುದು ; ಸಂತೋಷದಿಂದ ಉಣಬಹುದು. ಹೀಗಿರುವಲ್ಲಿ, ಹಣವಂತರಿಗೆ ಆತ್ಮಾವಲಂಬನೆಯ ಗುಣವು ರುಚಿಸಲಾರದೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಕೂತುಂಬುವನಿಗೆ ಕುಡಿಕೆಯ ಹಣ ಸಾಲದೆಂಬ ನಾಣ್ನುಡಿಯು ಈ ಸಂದರ್ಭದಲ್ಲಿ ಸಮಂಜಸವಾಗಿದೆ. ಪರಾಧೀನತೆಯು ಮೊತ್ತ ಮೊದಲು ಆನಂದಮಯವಾಗಿದ್ದರೂ, ಕಟ್ಟಕಡೆಗೆ ಮೋಸಮಾಡದಿರದು. ಪಿತ್ರಾರ್ಜಿತವಾದ ಸ್ವತ್ತು ಮುಗಿದ ಮೇಲೆ ಜನರು ಗುಲಾಮರಂತೆ ಕಾಲ ಕಳೆಯಬೇಕಾಗುವುದು. ಆದುದರಿಂದ ಮನುಷ್ಯನು ಬಡತನವೆಂದಾಗಲಿ, ಭಾಗ್ಯವೆಂದಾಗಲಿ, ಸುಮ್ಮನೆ ಕಾಲ ಹರಣಮಾಡದೆ ಆತ್ಮಾವಲಂಬಿಯಾಗುವುದು ಶ್ರೇಯಸ್ಕರವಾದುದು. ಆತ್ಮಾವಲಂಬನೆ ಅಥವಾ ಸ್ವಸಹಾಯವು ಎಂದೆಂದಿಗೂ ಜಯವನ್ನುಂಟುಮಾಡುತ್ತದೆ. ಆತ್ಮಾವಲಂಬಿಗಳನ್ನು ದೇವರು ಮೆಚ್ಚುವನು. ಒಮ್ಮೆ ಬಂಡಿಯನ್ನು ಹೊಡೆಯುವವನಿಗೆ ದೇವರು ಹೇಗೆ ಸಹಾಯಮಾಡಿದನೆಂಬ ಕಥೆಯನ್ನು ಎಲ್ಲರೂ ಬಲ್ಲರು. ಕೆಸರಿನಲ್ಲಿ ಹೂತುಹೋಗಿದ್ದ ಚಕ್ರವನ್ನು ಬಂಡಿಯವನು ಮೇಲಕ್ಕೆತ್ತುವುದೇ ಸ್ವಸಹಾಯ ; ಅದಕ್ಕೆ ಪ್ರತಿಫಲವಾಗಿ ಚಕ್ರವು ಮೇಲಕ್ಕೆದ್ದುದೇ ಭಗವಂತನ ಅನುಗ್ರಹ. ಭಗವಂತನು ಪಾಪಭೀರುಗಳಾದ ನರರ ಕಣ್ಣಿಗೆ ಕಾಣಿಸದಿದ್ದರೂ, ಆತ್ಮಾವಲಂಬಿಗಳು ಪ್ರಪಂಚದಲ್ಲಿ ಬೀಳುವ ಪಾಡನ್ನು ನೋಡಿ ಕನಿಕರಪಟ್ಟು, ಅವರಿಗೆ ಸಹಾಯ ಮಾಡುವನು.

ಹೇ, ಆತ್ಮಾವಲಂಬನೆಯೇ, ನಿನ್ನ ಪ್ರತಾಪವು ಅತಿಶಯವಾದುದು. ನಿನ್ನನ್ನು ಅನುಸರಿಸಿದವನು ಎಂದಿಗೂ ತನ್ನ

ಕಾರ್ಯದಲ್ಲಿ ಅಪಜಯವನ್ನು ಪಡೆಯಲಾರನು. ಜಗನ್ನಿಯಾಮಕನಾದ ಭಗವಂತನ ಅಂಶವು ನೀನೇ ; ನಿನ್ನನ್ನು ನಂಬಿದವನು ದೇವರನ್ನು ನಂಬಿದ ಹಾಗೆ; ಆದರೆ ನೀನು ಯಾವಾಗಲೂ ಬಡವರ ಮನೆಯ ಬಾಗಿಲಲ್ಲಿ ಕಾದಿರುತ್ತೀಯೆ ; ಬಡವರನ್ನು ರಕ್ಷಿಸುವೆನೆಂದು ನೀನು ದೃಢಸಂಕಲ್ಪ ಮಾಡಿರುವಂತೆ ತೋರುವುದು. ದ್ವಾಪರಯುಗದಲ್ಲಿ ಶ್ರೀ ಕೃಷ್ಣಪರಮಾತ್ಮನು ಪಾಂಡವರ ಬಳಿವಿಡಿದು, ಅವರ ಕಷ್ಟಗಳನ್ನೆಲ್ಲಾ ತಾನೂ ಅನುಭವಿಸಿದನು. ಪಾಂಡವರು ಮರಣ ಪರ್ಯಂತವೂ ಆತನನ್ನು ಮರೆಯಲಿಲ್ಲ. ನೀನಾದರೋ ಬಡವರಿಗೆ ಶ್ರೀಕೃಷ್ಣನೋಪಾದಿಯಲ್ಲಿ ಸಹಾಯ ಮಾಡುತ್ತೀಯೆ. ಜಯಲಕ್ಷ್ಮಿಯನ್ನು ನೀನು ಅವರ ಬಳಿಗೆ ತಂದು ಬಿಡುತ್ತೀಯೆ. ಆದರೆ, ಸುಖವೆಂಬ ಮಧುವಿನ ಸವಿಯು ತಿಳಿದ ಮೇಲೆ, ಬಡವರು ನಿನ್ನನ್ನು ಮರೆಯುವರು. ಅಂತಹವರಿಗೂ ತಕ್ಕ ಪ್ರತೀಕಾರವನ್ನು ನೀನು ಮಾಡುತ್ತೀಯೆ. ನಿನ್ನ ಬಲಗೈಯ್ಯಲ್ಲಿ ಭಾಗ್ಯಲಕ್ಷ್ಮಿಯನ್ನೂ, ಎಡಗೈಯ್ಯಲ್ಲಿ ದಾರಿದ್ರ್ಯಲಕ್ಷ್ಮಿಯನ್ನೂ ಹಿಡಿದು, ನಿನ್ನನ್ನು ಮರೆತವರಿಗೆ ದಾರಿದ್ರ್ಯಲಕ್ಷ್ಮಿಯನ್ನು ಕೊಟ್ಟು, ಅವರ ಭಾಗ್ಯಲಕ್ಷ್ಮಿಯನ್ನು ಹಿಂದಕ್ಕೆ ಕರೆಯಿಸಿಕೊಳ್ಳುವೆ. ಇದೇನು ನಿನ್ನ ಅಭಿಮಾನವೋ? ಆಗ್ರಹವೋ? ತಿಳಿಯದು. ಮಾಡಿದುಪಕಾರವನ್ನು ಮರೆಯುವ ಮಾನವರಿಗೆ ನೀನು ಕೊಡುವ ಈ ಶಿಕ್ಷೆಯು ಯೋಗ್ಯವಾದುದು.

ಆತ್ಮಾವಲಂಬನೆಯಿಂದ ಅಭಿವೃದ್ಧಿಗೆ ಬಂದ ಕೆಲವು ಮಹನೀಯರನ್ನು ಇಲ್ಲಿ ಉದಹರಿಸುವೆವು. ಸಾಹಿತ್ಯ, ತತ್ವಶಾಸ್ತ್ರ, ವಿಜ್ಞಾನಶಾಸ್ತ್ರ, ಕುಶಲವಿದ್ಯೆ, ರಾಜ್ಯಾಡಳಿತ ಇವೇ ಮೊದಲಾದ ಶಾಸ್ತ್ರಗಳಲ್ಲಿ ಅದ್ವಿತೀಯ ಪಾಂಡಿತ್ಯವನ್ನು ಪಡೆದ

ಅನೇಕ ಮಹಾತ್ಮರ ಜೀವನ ಚರಿತ್ರೆಗಳನ್ನು ಪರಿಶೀಲಿಸಿ ನೋಡಿ ದರೆ, ಅವರು ಹುಟ್ಟಿದ ಹೀನಸ್ಥಿತಿಗೂ, ಹತ್ತಿದ ಉನ್ನತಸ್ಥಾನ ಕ್ಕೂ ಅಜಗಜಾಂತರ ವ್ಯತ್ಯಾಸವಿದೆ. ಅಮೇರಿಕದ ಅಸಹಾಯ ಶೂರರಲ್ಲಿ ಅಗ್ರಗಣ್ಯನೆನಿಸಿದ ಬೆಂಜಮಿನ್ ಫ್ರಾಂಕ್ಲಿನ್ ಎಂಬ ಮಹಾಶಯನು ಕೇವಲ ಬಡತನದಲ್ಲಿ ಜನಿಸಿದವನು ; ಈತನು ತನ್ನ ಹತ್ತನೆಯ ವರ್ಷದ ವರೆಗೆ ಓದುತ್ತಿದ್ದು, ತಂದೆಯ ಅನುಮತಿಯಂತೆ ಅಷ್ಟಕ್ಕೇ ಶಾಲೆಯನ್ನು ಬಿಡಬೇಕಾಯಿತು. ಆದರೂ ಸ್ವಸಾಮರ್ಥ್ಯದ ಬಲದಿಂದ ತನ್ನ ಹದಿನಾರನೆಯ ವಯಸ್ಸಿನಲ್ಲಿಯೇ ಒಂದು ವರ್ತಮಾನ ಪತ್ರಿಕೆಯನ್ನು ಹೊರ ಡಿಸಿದನು. ಕಡೆಗೆ ಅವನು ಮನೆ ಮಠಗಳನ್ನು ಬಿಟ್ಟು ನ್ಯೂ ಯಾರ್ಕ್ ಪಟ್ಟಣವನ್ನು ಸೇರಿದನು. ಅಲ್ಲಿ ಮಹಾಪುರುಷರನ್ನು ಮೆಚ್ಚಿಸಿ,"ಯೂನಿವರ್ಸಲ್ ಇನ್ಸ್ಟ್ರಕ್ಟರ್"ಎಂಬ ವರ್ತಮಾನ ಪತ್ರಿಕೆಯನ್ನು ಸ್ವಾಧೀನಪಡಿಸಿಕೊಂಡು, ಅದಕ್ಕೆ "ಪೆನ್ಸಿಲ್ವೇ ನಿಯ ಗೆಜೆಟ್" ಎಂಬ ಹೆಸರನ್ನಿಟ್ಟು, ತಾನೇ ಅದನ್ನು ಕ್ರಮ ವಾಗಿ ನಡೆಯಿಸುತ್ತಿದ್ದನು. ಅನಂತರ ಅಂಚೆಯ ಇಲಾಖೆ ಯಲ್ಲಿ ಸೇರಿ, "ಪೋಸ್ಟ್ ಮಾಸ್ಟರ್ ಜನರಲ್" ಪದವಿಗೆ ಬಂದನು. ತನ್ನ ನಾಲ್ಕತ್ತನಾಲ್ಕನೆಯ ವಯಸ್ಸಿನಲ್ಲಿ ವಿಜ್ಞಾನ ಶಾಸ್ತ್ರವನ್ನು ಪರಿಶೋಧಿಸಿ, ಅತ್ಯಂತ ಕಠಿಣವಾದ ವಿದ್ಯುಚ್ಛ ಕ್ತಿಯ ಭಾಗದಲ್ಲಿ ಪಾರಂಗತನಾದನು. ಸಿಡಿಲಿನ ಹೊಡೆತ ವನ್ನು ಹೀರುವಂತೆ ಈಗಿನ ದೊಡ್ಡ ದೊಡ್ಡ ಕಟ್ಟಡಗಳ ತುದಿ ಯಲ್ಲಿರುವ ಸಲಾಕೆಗಳ ಉಪಯೋಗವನ್ನು ಕಂಡು ಹಿಡಿದವನು ಆತನೇ ; "ಹಾರ್ಮೊನಿಕ್" ಎಂಬ ಒಂದು ಸಂಗೀತ ಯಂತ್ರ ವನ್ನು ಆತನೇ ನಿರ್ಮಿಸಿದವನು. ಅನಂತರ ಆ ಮಹನೀಯನು ಅಮೇರಿಕದ ಕಾಂಗ್ರೆಸ್ಸಿನಲ್ಲಿ ಸದಸ್ಯನಾದನು. ತನ್ನ ಜೀವನ

ಚರಿತ್ರೆಯನ್ನು ತಾನೇ ಬರೆದು, ಎಂಭತ್ತನಾಲ್ಕನೆಯ ವಯಸ್ಸಿನಲ್ಲಿ ದೈವಾಧೀನನಾದನು. ಇದು ಬಡತನದ ಫಲವೋ ಆತ್ಮಾವಲಂಬನದ ಫಲವೋ, ಯೋಚಿಸಿ ತಿಳಿಯಬೇಕಾಗಿದೆ. ಜಾರ್ಜ್ ಸ್ಟೀಫೆನ್ಸನ್ ಎಂಬ ಮಹಾಪುರುಷನು ಬಾಲ್ಯದಲ್ಲಿಯೇ ಬಡತನದ ಕೈಯ್ಯನ್ನು ಹಿಡಿದು, ಆತ್ಮಸಹಾಯಬಲದಿಂದ ಅದನ್ನು ಧ್ವಂಸಮಾಡಿದನು. ಓದು ಬರಹಗಳಲ್ಲಿ ಆತನು ವಿಶೇಷ ಪಾಂಡಿತ್ಯವನ್ನು ಪಡೆದಿರಲಿಲ್ಲ. ಆದರೆ, ಆತನಿಗಿದ್ದ ಪ್ರತಿಭಾಶಕ್ತಿಯು ಅದ್ಭುತವಾದುದು. ತನ್ನ ಹದಿನೇಳನೆಯ ವಯಸ್ಸಿನಲ್ಲಿಯೇ ಆತನು ಒಂದು ಯಂತ್ರವನ್ನು ನಡೆಯಿಸುವ ಕೆಲಸದಲ್ಲಿ ನಿಂತನು. ಕ್ರಮೇಣ ಮತ್ತೊಂದು ದೊಡ್ಡ ಯಂತ್ರವನ್ನು ಆತನು ನಡೆಯಿಸಬೇಕಾಯಿತು. ಈ ಕೆಲಸದಲ್ಲಿ ಆತನು ವಿಶೇಷ ನಿಪುಣನಾಗಿ, ತಾನು ಸಂಪಾದಿಸಿದ ಹಣದಿಂದ ತನ್ನ ತಂದೆಯ ಸಾಲವನ್ನು ತೀರಿಸಿ, ಬುದ್ಧಿಬಲದಿಂದ "ಕೆನಿಲ್ ವರ್ತ್" ಎಂಬ ಸ್ಥಳದಲ್ಲಿ ವರ್ಷಂಪ್ರತಿ ನೂರು ಸವರ್ನ್‌ಗಳ ಸಂಬಳವುಳ್ಳ ಇಂಜನಿಯರ್ ಕೆಲಸಕ್ಕೆ ಬಡತಿಯನ್ನು ಪಡೆದನು. ಕಡೆಗೆ ತನಗಿದ್ದ ಅನುಭವದಿಂದ "ಸೇಫ್ಟಿ ಲ್ಯಾಂಪು" ಎಂಬ ದೀಪವನ್ನು ಕಂಡು ಹಿಡಿದನು. ಈಗಲೂ ಇದನ್ನು ಗಣಿಗಳಲ್ಲಿ ಕೆಲಸ ಮಾಡುವವರು ಉಪಯೋಗಿಸುತ್ತಾರೆ. ರೈಲುಬಂಡಿಯನ್ನು ಎಳೆಯುವ "ಎಂಜಿನ್" ಎಂಬ ಯಂತ್ರವನ್ನು ಮೊತ್ತ ಮೊದಲು ಕಂಡು ಹಿಡಿದವನು ಆತನೇ ; ಅದರಿಂದ ವಿಶೇಷ ಲೋಕೋಪಕಾರವಾಗಿರುವ ವಿಷಯವು ಎಲ್ಲರಿಗೂ ತಿಳಿದೇ ಇದೆ.

ಹೀಗೆಯೇ ಒಬ್ಬ ಬಡ ನಾಯಿಂದನ ಹೊಟ್ಟೆಯಲ್ಲಿ ಹುಟ್ಟಿದ ಲಾರ್ಡ್ ಟೆನ್‌ಟರ್‌ಡನ್ ಎಂಬ ಮಹನೀಯನು

ಕೇವಲ ಆತ್ಮಾವಲಂಬನೆಯ ಬಲದಿಂದ ಇಂಗ್ಲೆಂಡಿನ ಮುಖ್ಯ ನ್ಯಾಯಾಧೀಶ ಪದವಿಯನ್ನೇರಿದನು. ಪ್ರಖ್ಯಾತವಾದ "ಪಿಲಿಗ್ರಿಮ್ಸ್ ಪ್ರೋಗ್ರೆಸ್" ಎಂಬ ಗ್ರಂಥವನ್ನು ಬರೆದ ಜಾನ್ ಬುನ್ಯನ್ ಎಂಬ ಮಹಾತ್ಮನು ಕೇವಲ ಆತ್ಮಾವಲಂಬಿಯಾಗಿದ್ದನು. ಬೆಹರಾಂಜಿ ಮಲಬಾರಿ ಎಂಬ ಮಹನೀಯನು ಕಡುಬಡವನು; ಆತನು ಚಿಕ್ಕಂದಿನಲ್ಲಿಯೇ ತಬ್ಬಲಿಯಾದನು. ಆದರೆ ತನ್ನ ಕರ್ತವ್ಯವನ್ನು ಮಾಡಿದುದರಿಂದ ಆತನು ಕಡೆಗೆ ಪ್ರಸಿದ್ಧ ಗ್ರಂಥಕರ್ತನೂ, ಸಮಾಜಸಂಸ್ಕರಣ ಕಾರ್ಯದಲ್ಲಿ ಅಗ್ರಗಣ್ಯನೂ ಆದನು. ಜೇಮ್ಸ್ ಏಬ್ರಾಮ್ ಗಾರ್ಫೀಲ್ಡ್ ಎಂಬ ಸುಪ್ರಸಿದ್ಧ ದೇಶಭಕ್ತನು ತನ್ನ ಕಾರ್ಯಶೀಲತೆ ಮತ್ತು ಸ್ವಸಹಾಯಗಳ ಬಲದಿಂದ ಅಮೇರಿಕದ ಸಂಯುಕ್ತಸಂಸ್ಥಾನದ ಅಧ್ಯಕ್ಷನಾದನು. ಆಂಗ್ಲೇಯ ಕವಿಗಳಲ್ಲೆಲ್ಲಾ "ಡಾಕ್ಟರ್ ಜಾನ್ಸನ್" ನೆಂಬ ಕವಿಯು ಆತ್ಮಾವಲಂಬನೆಯ ಮೂರ್ತಿಮತ್ತಾಗಿದ್ದನು. ಪರಾಧೀನತೆ ಎಂದರೆ ಈತನಿಗೆ ಆಗದು. ಈತನು ತನ್ನ ಜೀವಮಾನವನ್ನೆಲ್ಲಾ ಸ್ವತಂತ್ರನಾಗಿಯೇ ಕಳೆದನು. ಆ ಕಾಲದ ಅನೇಕ ಪ್ರಖ್ಯಾತ ಪುರುಷರು ಅವನ ಆತ್ಮಾವಲಂಬನ ಗುಣಕ್ಕೆ ಮೆಚ್ಚಿ ಯಾವಾಗಲೂ ಆತನ ಸಹವಾಸದಲ್ಲಿಯೇ ಇರುತ್ತಿದ್ದರು. ಆತನಲ್ಲಿ ಈ ಗುಣವು ಎಷ್ಟರಮಟ್ಟಿಗೆ ಬೇರೂರಿದ್ದಿತೆಂಬುದಕ್ಕೆ ಒಂದು ಉದಾಹರಣೆಯನ್ನು ಇಲ್ಲಿ ಕೊಡುವೆವು. ಆತನು ತನ್ನ ಬರವಣಿಗೆಯಿಂದ ಸಾಹಿತ್ಯ ಪ್ರಪಂಚಕ್ಕೆ ಮಾಡಿದ ಅತಿಶಯವಾದ ಸಹಾಯಕ್ಕೆ ಸಂತೋಷಪಟ್ಟು ಆತನಿಗೆ ತಕ್ಕ ಬಹುಮಾನಮಾಡಬೇಕೆಂದೆಣಿಸಿ, ಸರ್ಕಾರದವರು ವರ್ಷಂಪ್ರತಿ ಮುನ್ನೂರು ಸವರನ್‌ಗಳ "ಪೆನ್ಷನ್" ನನ್ನು ದಯಪಾಲಿಸಿದರು. ಆದರೆ, ಜಾನ್‌ಸನ್ನನು ಅದಕ್ಕೆ ಮೊದಲು

ಒಪ್ಪಲಿಲ್ಲ. ಸರ್ಕಾರದವರ ಹಣವನ್ನು ಉಪಯೋಗಿಸಿದ ಮೇಲೆ ತನ್ನ ಜೀವನವು ಪರಾಧೀನವಾಗುವುದೆಂದು ಆತನು ಭಾವಿಸಿದ್ದನು. ಸರ್ಕಾರದಲ್ಲಿ ಕೆಲಸ ಮಾಡದೆ, ಕೂತಿದ್ದ ಕಡೆಗೆ ಬಿಟ್ಟಿಯು ಸಂಬಳವನ್ನು ಪಡೆಯುವುದು ತುಂಬ ಅವ ಮಾನಕರವೆಂದು ಅತನು ಸರ್ಕಾರಕ್ಕೆ ಬರೆದನು. ಆದರೆ ಈ ಹಣವು ಆತನು ಮಾಡಿದ ದೇಶಸೇವೆಗಾಗಿ ಸರ್ಕಾರವು ಸಂತೋ ಷದಿಂದ ಕೊಟ್ಟುದೆಂದೂ, ಅದರಿಂದ ಆತನು ಯಾವ ವಿಧದಿಂ ದಲೂ ಪರಾಧೀನನಾಗಲಾರನೆಂದೂ ಸರ್ಕಾರದವರು ಉತ್ತರ ಕೊಟ್ಟರು. ಅಲ್ಲದೆ, ಆತನ ಸ್ನೇಹಿತರು ಇದಕ್ಕಾಗಿ ಆತನನ್ನು ಬಹಳ ಬಲಾತ್ಕಾರ ಮಾಡಿದರು. ಕಡೆಗೆ ಜಾನ್ಸನ್ನನು "ಪೆನ್ಷನ್" ಹಣವನ್ನು ಸ್ವೀಕರಿಸಿದನು. ಇದಲ್ಲವೇ ಆತ್ಮಾವ ಲಂಬನೆ !

ಮಹಾತ್ಮಾ ಗಾಂಧಿಯವರ ಉಪದೇಶವೇ ಆತ್ಮಾವ ಲಂಬನೆ. ಅವರ ಚರಿತ್ರೆಯೇ ಆತ್ಮಾವಲಂಬನೆಯ ಚರಿತ್ರೆ. ಅವರು ತಮಗೆ ಬೇಕಾದ ಬಟ್ಟೆಬರೆಗಳನ್ನು ತಾವೇ ನೆಯ್ದು ಕೊಳ್ಳುತ್ತಾರೆ. ಎಲ್ಲರೂ ಹೀಗೆಯೇ ಆತ್ಮಾವಲಂಬಿಗಳಾದರೆ ದೇಶದಲ್ಲಿ ಬಡತನದ ಸೊಲ್ಲೇ ಇರುವುದಿಲ್ಲ. ಮೊದಲು ತಾನು ಸ್ವತಂತ್ರನಾದರೆ ಅನಂತರ ದೇಶವೂ ಸ್ವತಂತ್ರವಾಗುವುದು. ಆದರೆ ಆತ್ಮಾವಲಂಬನ ಗುಣವು ಮನುಷ್ಯನಲ್ಲಿ ಹುಟ್ಟುವುದು ಬಹಳ ಕಷ್ಟ ; "ಕುಂಬಾರನಿಗೆ ವರ್ಷ, ದೊಣ್ಣೆಗೆ ನಿಮಿಷ" ಎಂಬಂತೆ ಎಲ್ಲರಿಗೂ ಪರಾಧೀನತೆಯ ಕಡೆಗೆ ಬಹಳ ಬೇಗ ಮನಸ್ಸು ತಿರುಗುತ್ತದೆ. ಪರಮಪವಿತ್ರವಾದ ಆತ್ಮಸಹಾಯ ವೆಂಬ ಗುಣವನ್ನು ಎಲ್ಲರೂ ಗ್ರಹಿಸಿದರೆ ಕುಂದುಕೊರತೆಗಳೇ ಆಗಲಿ, ದಂಡದೋಷಗಳೇ ಆಗಲಿ, ಮನುಷ್ಯನನ್ನು ಸೇರುವು

ದಿಲ್ಲ. ತಾನು ಮಾಡಿದ ಕೆಲಸದ ಪ್ರತಿಫಲವನ್ನು ತಾನೇ ಅನುಭವಿಸುವಾಗ ಉಂಟಾಗುವ ಸಂತೋಷಕ್ಕೆ ಪಾರವೇ ಇಲ್ಲ. ಆತ್ಮಾವಲಂಬಿಗಳ ಮಹಿಮೆಯಿಂದ ರಾಜ್ಯಲಕ್ಷ್ಮಿಯು ಒಲ್ಯೈಸುವಳು. ದಾರಿದ್ರ್ಯಲಕ್ಷ್ಮಿಯು ಕಣ್ಮರೆಯಾಗುವಳು. ದೇಶದಲ್ಲೆಲ್ಲಾ ಸುಖಶಾಂತಿಗಳು ನೆಲೆಗೊಳ್ಳುವುವು. ತಿರುಪೆಗಾಗಿ ಅಲೆಯುವ ಜನರ ಸಂಖ್ಯೆಯು ಅಳಿಸಿಹೋಗುವುದು. ಎಲ್ಲರೂ ಸುಖಸಮೃದ್ಧಿಯಿಂದ ಆನಂದ ಹೊಂದುವರು.

"ಎಷ್ಟು ಮಾಡಿದರೇನು? ಎಲ್ಲವೂ ಅದೃಷ್ಟಾಯತ್ತ. ಅದೃಷ್ಟವೊಂದಿದ್ದರೆ ಮಾಡಿದುದೆಲ್ಲಾ ಫಲಿಸುವುದು" ಎಂದು ವಾದಿಸುವ ಜನರು ಮೇಲೆ ಹೇಳಿದ ಮಹನೀಯರ ಚರಿತ್ರೆಗಳಿಂದ ತಿಳಿಯಬೇಕಾದ ನೀತಿಯೊಂದುಂಟು. ಅವರು ತಮ್ಮ ಕಾರ್ಯದಲ್ಲಿ ಜಯಶೀಲರಾದುದು ಅದೃಷ್ಟದಿಂದಲ್ಲ. ಮೊದಲೇ ಅದೃಷ್ಟದಲ್ಲಿ ನಂಬುಗೆಯನ್ನಿಟ್ಟುಕೊಂಡು ವ್ಯರ್ಥ ಕಾಲಕ್ಷೇಪ ಮಾಡುವ ಜನರ ಗೋಳನ್ನು ಹೇಳತೀರದು. ಅವರು ಹರಿಭಕ್ತಿ ಸಾರದಲ್ಲಿ ಹೇಳಿರುವ ಒಂದು ಪದ್ಯವನ್ನು ನೆನಪಿಗೆ ತಂದುಕೊಳ್ಳಲಿ.

ಎಷ್ಟು ಮಾಡಲು ಮುನ್ನ ತಾ ಪಡೆ ।
ದಷ್ಟು ಯೆಂಬರು ಲೋಕದೊಳು ಮತಿ ।
ಗೆಟ್ಟ ಮಾನವರಾಡುತಿಹರಾಮಾತದಂತಿರಲಿ ॥
ಪಟ್ಟವಾರಿಂದಾಯ್ತು ಧ್ರುವನಿಗೆ ।
ಕೊಟ್ಟ ವರ ತಪ್ಪಿತೆ ಕುಚೇಲಗೆ ।
ಯಿಷ್ಟಬಾಂಧವ ನೀನು ರಕ್ಷಿಸು ನಮ್ಮನನವರತ ॥

ಈ ಪದ್ಯವನ್ನು ಪ್ರಖ್ಯಾತ ಪುರಾತನ ಕವಿಯಾದ ಕನಕದಾಸನು ಬಹಳ ವರ್ಷಗಳ ಕೆಳಗೆ ಹೇಳಿರುವನಾದರೂ ಈ ಮಾತುಗಳು ಈಗಲೂ ಅನುಭವಸಿದ್ಧವಾದುವುಗಳಾಗಿವೆ.

"ಅಯ್ಯೋ ದೇವರೇ !" ಎಂದು ಹಂಬಲಿಸಿದರೆ ಪ್ರಯೋಜನವಿಲ್ಲ. ಧೃವನಂತೆಯೂ, ಕುಚೇಲನಂತೆಯೂ ಆತ್ಮಾವಲಂಬನದಿಂದ ಕೆಲಸ ಮಾಡಿದರೆ ಜಗನ್ನಿಯಾಮಕನಾದ ಭಗವಂತನು ಪ್ರತಿಫಲವನ್ನು ಕೊಟ್ಟೇಕೊಡುವನು. ಆತ್ಮಾವಲಂಬಿಗೆ ಅದೃಷ್ಟದ ಯೋಚನೆ ಇರಬಾರದು. ಆತನಿಗೆ ಸೂಕ್ಷ್ಮಪ್ರಯತ್ನದಿಂದ ಭಗವಂತನ ಸಾನ್ನಿಧ್ಯವು ದೊರೆಯುವುದು. ಇಹದಲ್ಲಿ ಅಪರಿಮಿತಸುಖವನ್ನನುಭವಿಸುವನು. ಬಡತನವೇ ಆಗಲಿ, ಇನ್ನಾವ ಭಯಂಕರವಾದ ವಸ್ತುವೇ ಆಗಲಿ, ಆತ್ಮಾವಲಂಬಿಯ ಇದಿರಿಗೆ ನಿಲ್ಲಲಾರವು. ಆತನು ಎಂತಹ ಕಠಿಣವಾದ ದಾರಿಯನ್ನಾದರೂ ಸುಲಭವಾಗಿ ದಾಟಬಲ್ಲನು. ಸೋಮಾರಿಯಂತೆ ಅದೃಷ್ಟದ ಲೆಕ್ಕವನ್ನು ಎಣಿಸುತ್ತಿರುವವನು ಎಣಿಸುವುದರಲ್ಲಿಯೇ ಸಾಯುವನು. ಆದುದರಿಂದ ಎಲ್ಲರೂ ಅದೃಷ್ಟವನ್ನು ನಂಬಿ ಹಾಳಾಗದೆ, ಆತ್ಮಬುದ್ಧಿಯಿಂದ ದಿನೇ ದಿನೇ ಮುಂದುವರಿಯುತ್ತಿರಬೇಕು.

---

## ಪ್ರಕರಣ ೬

### ಸುಗುಣ—ನಡೆವಳಿ.

ದಯಾಶೀಲನೂ ಉದಾರಮತಿಯೂ ಆದವನು ಪ್ರಾಣಿಹಿಂಸೆಯನ್ನು ಮಾಡಲಾರನು. ಮತ್ತೊಬ್ಬರಲ್ಲಿರುವ ದೋಷಗಳನ್ನು ಎತ್ತಿ ಆಡಲಾರನು. ಇಷ್ಟೇ ಅಲ್ಲ. ಶಮದಮಾದಿ ಸದ್ಗುಣಗಳು ಇವನಲ್ಲಿ ಯಾವಾಗಲೂ ಶೋಭಿಸುತ್ತಿರುವುವು. ತನ್ನಲ್ಲಿರುವ ಹುಳುಕನ್ನು ಯಾರಾದರೂ ಹೊರಪಡಿಸಿದರೆ ಅವರನ್ನು ತನ್ನ ನಡೆವಳಿಗಳಿಂದ ಮೆಚ್ಚಿಸಿ, ಅವರಿಂದಲೇ ತಕ್ಕ

ಸನ್ಮಾನವನ್ನು ಪಡೆಯುವನು. ಆದರೆ ಎಷ್ಟೋ ಜನರು ತಮ್ಮ ಸ್ಥಿತಿಗೆ ತಾವೇ ಹಿಗ್ಗುವರು.

ಸುಭಾಷಿತದಲ್ಲಿ ಹೇಳಿರುವುದೇನೆಂದರೆ:—

**ಬಲ್ಲವರಂ ಬೆಸಗೊಳ್ಳದೆ ।**
**ಕಲ್ಲಿಸೆತನದಿಂದ ತಾನು ನುಡಿದುಮು ಘನವೆಂ ॥**
**ಸೆಲ್ಲರೊಳು ಹೋರುವಂಗಂ ।**
**ಬಲ್ಲಿದರಾರುಂಟು ಧರೆಗೆ ಚೂಡಾರತ್ನಾ ॥**

ಇಂತಹ ಮೂರ್ಖರಿಗೆ ಬುದ್ಧಿ ಹೇಳುವುದಕ್ಕಾಗುವುದಿಲ್ಲ. ಅವರನ್ನು ಸ್ವಲ್ಪ ಮುಖಸ್ತುತಿ ಮಾಡಿ, "ನೀನೇ ಧೀರ, ನೀನೇ ಶೂರ," ನೆಂದು ಆಕಾಶಕ್ಕೆ ಎತ್ತಿ ಕಟ್ಟುವುದು ಲೇಸು, ಆಕಾಶದಿಂದ ಕೈಕಳಚಿ ಬಿದ್ದಮೇಲೆ ಅವರಿಗೇ ಬುದ್ಧಿಬರುವುದು.

ಪ್ರಾಣಿಹಿಂಸೆಯು ದಿನೇ ದಿನೇ ಅಭಿವೃದ್ಧಿಗೆ ಬರುತ್ತಿದೆ. ಪ್ರಾಣಿಹಿಂಸೆ ಮಾಡಬಾರದೆಂದು ಹೇಳುವರು ಹೆಚ್ಚಾದರೇ ಹೊರತು, ಅದನ್ನು ಬಿಟ್ಟವರು ಎಲ್ಲಿಯೋ ಅವಿತುಕೊಂಡರು. ಮೂಕಪ್ರಾಣಿಗಳನ್ನು ಕೊಲ್ಲುವುದು ಬಹಳ ಸಂತಾಪವನ್ನುಂಟುಮಾಡುತ್ತದೆ. ಹಸಿವು ಬಾಯಾರಿಕೆಗಳಾದರೆ ಅವು ಹೇಳಲಾರವು. ಕಷ್ಟಸುಖಗಳನ್ನು ತಿಳಿಸಲಾರವು. ಕೇವಲ ಪ್ರೀತಿಯಿಂದ ಸಲಹಿದ ಪ್ರಾಣಿಗಳನ್ನು ಕೊನೆಗೆ ಆಹುತಿಕೊಡುವುದು ಯಾವ ನ್ಯಾಯ ? ಮಾಯವಾದ ಪ್ರಾಣವನ್ನು ಮರಳಿ ಕೊಡುವ ಶಕ್ತಿಯಿಲ್ಲದೆ, ಪ್ರಾಣಿಗಳ ಮೇಲೆ ಮಸೆದ ಕೊಡಲಿಯನ್ನು ಹಿಡಿಯುವವನ ಕೈಯು ಮರದ ತುಂಡು.

ದೇವರ ಪ್ರಾರ್ಥನೆಗೆಂದು ಸುಮ್ಮನೆ ಕೈಮುಗಿಯುವನು ದಾಸನಲ್ಲ. ಯಾವನು ಪ್ರಾಣಿದಯೆ, ಉದಾರಬುದ್ಧಿ ಇವು

ಗಳಿಂದ ಮನಸ್ಸನ್ನು ಶುದ್ಧಪಡಿಸಿ, ತನ್ನ ಸುತ್ತುಮುತ್ತಲೂ ಇರುವ ಜೀವಕೋಟಿಯನ್ನು ತನ್ನಂತೆ ಕಾಣುವನೋ, ಅವನೇ ನಿಜವಾದ ದೈವಭಕ್ತನು. ಅವನೇ ನಿಜವಾದ ದೇಶಭಕ್ತನು. ಅವನಿಂದ ದೇಶದಲ್ಲಿ ಸುಖಶಾಂತಿಗಳು ನೆಲೆಗೊಳ್ಳುವುವು.

ಪ್ರಪಂಚದಲ್ಲಿ ಖ್ಯಾತಿವಂತನಾಗಬೇಕಾದರೆ ಮೇಲೆ ಕಂಡ ಸುಗುಣಗಳ ಜತೆಗೆ ಧೈರ್ಯವೂ, ಸಾಹಸವೂ ಇರಬೇಕು. ಈ ಗುಣಗಳು ಇರುವ ಮನುಷ್ಯನು ಈ ನರಜನ್ಮವೆಂಬ ಯಾತ್ರೆಯಲ್ಲಿ ಬೇಗನೆ ದೇವರ ದರ್ಶನವನ್ನು ಪಡೆಯುವನು. ಉಳಿದವರು ಆ ಯಾತ್ರೆಯ ಮಾಳದಲ್ಲಿ ಎಲ್ಲಿಯೋ ಒಂದು ಕಡೆ ನಿದ್ರೆಗೈದು, ವ್ಯರ್ಥವಾಗಿ ಕಾಲವನ್ನು ಕಳೆದು ಸಾಯುವರು. ಧೈರ್ಯವೂ ಸಾಹಸವೂ ಇಲ್ಲದವನು ಸತ್ಯಭ್ರಷ್ಟನಾಗಬೇಕಾಗುವುದು. ಇತರರನ್ನು ಮೆಚ್ಚಿಸಲು ನೀಚಕೃತ್ಯಗಳನ್ನಾದರೂ ಮಾಡಲು ಸಿದ್ಧರಾಗಿರುವ ನರರು ಕಡೆಗೆ ಹೀನಸ್ಥಿತಿಗಿಳಿಯುವರು. ಧರ್ಮಕ್ಕೆ ಚ್ಯುತಿಯುಂಟಾಗದಂತೆ ನಡೆಯುವನೇ ಪರಮ ಸಾಹಸಿಯು.

ಆನೆ ನೀರಾಟದಲಿ ಮೀನ ಕಂಡಂಜುವುದೆ ।
ಹೀನಮಾನವರ ಬಿರಿನುಡಿಗೆ ಸತ್ಯದ ।
ಜ್ಞಾನಿಯಂಜುವನೆ ಸರ್ವಜ್ಞ ॥

ಎಂದು ಸರ್ವಜ್ಞಮೂರ್ತಿಯು ಸಾರಿ ಹೇಳಿರುವನು. ಮರಾಟೆಯವರ ಚರಿತ್ರೆಯಲ್ಲಿ ರಘುನಾಥರಾಯನ ವಿಷಯವನ್ನು ಎಲ್ಲರೂ ಓದಿರಬಹುದು. ಆತನು ತನ್ನ ದಾಯಾದಿ ನಾರಾಯಣರಾಯನನ್ನು ಕೊಂದ ಬಳಿಕ ಕ್ರೂರಕೃತ್ಯದ ಆಪಾದನೆಯನ್ನು ತಪ್ಪಿಸಿಕೊಂಡು, ಕೆಲವು ಕಾಲ ಕಣ್ಮರೆಯಾಗಿರುವುದು ಉಚಿತವೆಂದು ಭಾವಿಸಿ, ತಾನು ಮೈಸೂರಿನ ಮೇಲೆ

ದಂಡೆತ್ತಿ ಹೊರಡುವೆನೆಂದು ಪಟ್ಟಣದಲ್ಲೆಲ್ಲಾ ಸಾರಿಸಿದನು. ತಾನು ಹೊರಡುವುದಕ್ಕೆ ಮೊದಲು ಪುಣೆಯ ಪುರಪ್ರಮುಖರನ್ನೆಲ್ಲಾ ಒಟ್ಟುಗೂಡಿಸಿ ಅವರ ಆಶೀರ್ವಾದವನ್ನು ಪಡೆಯಲು ಹೋದನು. ಆಗ, ಹೈಕೋರ್ಟಿನ ನ್ಯಾಯಾಧೀಶನಾದ ರಾಮುಶಾಸ್ತ್ರಿಯೂ ಅಲ್ಲಿಗೆ ಬಂದಿದ್ದನು. ರಘುನಾಥರಾಯನು ತಾನು ಪೇಷ್ವೆಯೆಂಬ ಅಧಿಕಾರಮದದಿಂದ ಹಿಂದಿನ ನೀಚಕೃತ್ಯವನ್ನು ಮರೆಮಾಚಲು ಸಭಿಕರನ್ನೆಲ್ಲಾ ಕುರಿತು, "ಪ್ರಜೆಗಳಿರಾ, ನಾನು ಈಗ ಕೈಗೊಂಡಿರುವ ದಂಡಯಾತ್ರೆಯಲ್ಲಿ ಮಹಾದೇವನಾದ ಈಶ್ವರನು ಜಯವನ್ನು ಅನುಗ್ರಹಿಸಲಿ" ಎಂದು ಕೂಗಿದನು. ಸತ್ಯಜ್ಞಾನಿಯಾದ ರಾಮುಶಾಸ್ತ್ರಿಯು ಆ ಹೀನಮಾನವನ ಪದವಿಗೆ ಅಂಜದೆ, ಧೈರ್ಯದಿಂದ ಎದ್ದು ನಿಂತು, "ಎಲೆಲ, ಕೊಲೆಪಾತಕನಾದ ರಘುನಾಥರಾಯ, ಕೇಳು. ದಾಯಾದಿಯ ರಕ್ತದಿಂದ ತೊಯ್ದ ಖಡ್ಗವನ್ನು ಹಿಡಿದು ನೀನು ಜಯಿಸುವುದೆಂದರೇನು ? ನಿನ್ನಂತಹ ನರಾಧಮನಿಗೆ ಭಗವಂತನ ಕೃಪೆಯಾಗಲಿ, ನಮ್ಮ ಆಶೀರ್ವಾದವಾಗಲಿ ಸಲ್ಲುವುದಿಲ್ಲ. ಇಗೋ, ನನ್ನ ಅಧಿಕಾರಬಲದಿಂದ ನಿನ್ನನ್ನು ಇಲ್ಲಿಯೇ ಸೆರೆಹಿಡಿದಿರುವೆನು. ನಾಳೆ ನಿನ್ನ ತಪ್ಪಿತಕ್ಕೆ ತಕ್ಕ ಶಿಕ್ಷೆಯನ್ನು ಅನುಭವಿಸಬೇಕಾದೀತು" ಎಂದು ಗರ್ಜಿಸಿದನು.

ರಘುನಾಥರಾಯನು ಅದನ್ನು ಕೇಳಿ ಅತ್ಯಂತ ಕೋಪದಿಂದ "ಆಹಾ, ಪೇಷ್ವೆಯನ್ನೂ ಶಿಕ್ಷೆಗೆ ಗುರಿಮಾಡುವ ಧೀರನು ಈ ಸಭೆಯಲ್ಲಿರುವನೇ ! ಎಲಾ ರಾಮುಶಾಸ್ತ್ರಿ, ನಿನಗೆ ಅಧಿಕಾರ ಕೊಟ್ಟವನು ನಾನು, ಈ ಕ್ಷಣವೇ ನಿನ್ನನ್ನು ಅಧಿಕಾರದಿಂದ ತಳ್ಳಿರುವೆನು. ನಿನ್ನ ಕೋರ್ಟು ಕಚೇರಿಗಳೆಲ್ಲಾ ಈ ದಿನವೇ ನೆಲಸಮವಾಗುವವು" ಎಂದು ಬಲು ಬಿರುಸಾಗಿ ಮಾತನಾಡಿ

ದನು. ನ್ಯಾಯಾಧೀಶನಾದರೋ ತನ್ನ ಕರ್ತವ್ಯವನ್ನು ತಾನು ಮಾಡಬೇಕೆಂದು ತಿಳಿದು, "ಎಲೈ ಪಾಪಿಯೇ, ಕೊಂದುಹಾಕಿರುವ ನಿನ್ನ ದಾಯಾದಿಯ ಪ್ರಾಣವನ್ನು ನೀನು ಹಿಂದಕ್ಕೆ ತರಬಲ್ಲೆಯಾ ? ನನ್ನನ್ನು ಅಧಿಕಾರದಿಂದ ತಳ್ಳಬಲ್ಲೆಯಾ ? ಇಗೋ, ನಿನ್ನಂತಹ ಚಂಡಾಲನ ಕೈಯಿಂದ ತಳ್ಳಿಸಿಕೊಳ್ಳುವುದಕ್ಕೆ ಮೊದಲೇ ನಾನು ನಿನ್ನ ರಾಜ್ಯವನ್ನು ಬಿಡುತ್ತೇನೆ. ನಿನ್ನನ್ನು ಪುನಃ ಕಣ್ಣೆತ್ತಿ ನೋಡುವುದಿಲ್ಲ," ಎಂದು ಹೇಳಿ ಹೊರಟುಹೋದನು. ಸತ್ಯಜ್ಞಾನಿಯಾದ ರಾಮಶಾಸ್ತ್ರಿಯು ಮುಂದೆ ಪೇಷ್ವೆ ನಾರಾಯಣರಾಯನ ಮಗನು ಪಟ್ಟಕ್ಕೆ ಬರುವ ವರೆಗೆ ಪುಣೆಗೆ ಕಾಲಿಡಲೇ ಇಲ್ಲ. ರಾಮಶಾಸ್ತ್ರಿಯೇ, ನೀನೇ ಧೀರನು ! ಧರ್ಮಪರಿಪಾಲನೆಗಾಗಿ ರಾಜನ ಬಿರುನುಡಿಗೆ ನೀನು ಹೆದರಲಿಲ್ಲ. ಬಹುಮಾನದಿಂದ ರಾಜನನ್ನು ಮೆಚ್ಚಿಸಿ, ಮಹಾ ಆಟೋಪದೊಡನೆ ಉನ್ನತಪದವೀಧರರಾಗಿ ಮೆರೆಯುವ ನರಾಧಮರು ನಿನ್ನಿಂದ ಸ್ವಧರ್ಮಪರಿಪಾಲನೆಗೆ ಬೇಕಾದ ಧೈರ್ಯವನ್ನು ಕಲಿತುಕೊಳ್ಳಬೇಕು.

ಸಾಹಸಿಯ ಇದಿರಿಗೆ ಆತಂಕಗಳು ನಿಲ್ಲಲಾರವು. ಅವುಗಳಿಗೆ ಔಷಧವನ್ನು ಕೊಡಬೇಕಾದುದಿಲ್ಲ. ಧೈರ್ಯ, ಸ್ಥೈರ್ಯಗಳೆಂಬ ಸದ್ಗುಣಗಳು ಈ ಆತಂಕಗಳನ್ನು ರಾಮಬಾಣದಂತೆ ನಿಗ್ರಹಿಸುವವು.

ಸವಾರನು ಧೈರ್ಯಶಾಲಿಯಾದರೆ ಕುದುರೆಯು ಸರಿಯಾಗಿ ನಡೆಯುವುದು. ಇಲ್ಲವಾದರೆ, ಅವನನ್ನು ಕೆಳಗೆ ಕೆಡವಿ, ಹಿಂಗಾಲುಗಳಿಂದ ಒದೆಯುವುದು. ಆದುದರಿಂದಲೇ ಆತಂಕಗಳು ಮನುಷ್ಯನನ್ನು ಹಾಳುಮಾಡಲು ಬರುವುದಿಲ್ಲವೆಂದು ಹಿಂದೆಯೇ ಹೇಳಿದೆ. ಹೀಗೆ ಮಾನವನ ಕಷ್ಟಸುಖಗಳಿಗೆ ಆತನೇ

ಕಾರಣನು. ಧೀರನೂ, ಸಾಹಸಿಯೂ ಆದವನು ತನ್ನ ಶಕ್ತಿಯನ್ನು ನ್ಯಾಯಮಾರ್ಗದಲ್ಲಿ ಉಪಯೋಗಿಸಿ ನಡೆದರೆ, ಆತನನ್ನು ಜಯಲಕ್ಷ್ಮಿಯು ಒಲಿಯುವಳು.—

ಧೈರ್ಯಶಾಲಿಯಾದವನು ಆತ್ಮಗೌರವವನ್ನು ಬಿಟ್ಟು ನಡೆಯುವುದಿಲ್ಲ. ಡ್ರೈಡನ್ ಎಂಬ ಪ್ರಖ್ಯಾತನಾದ ಆಂಗ್ಲೇಯ ಕವಿಯು ಹೀಗೆ ಹೇಳಿರುವನು.

"The brave man seeks not popular applause,
Nor over-power'd with arms, deserts his cause;
Unshamed though foil'd, he does the best he can; Force is of brutes, but honour is of man ;"

ಧೀರನು ಹೊಗಳು ಭಟ್ಟರನ್ನೂ ಬಗುಳುವ ನಾಯಿಗಳನ್ನೂ ಬೆನ್ನಟ್ಟದೆ ಯಾವ ಕೆಲಸವನ್ನೇ ಆಗಲಿ ಮಾಡುವುದರಲ್ಲಿ ಹಿಂಜರಿಯುವುದಿಲ್ಲ. ಹೀಗೆ ಸತ್ಯವಾಕ್ಯಪರಿಪಾಲನೆ, ಪ್ರಾಮಾಣಿಕತೆ, ದಯೆ, ಔದಾರ್ಯ, ಧೈರ್ಯ, ಸಾಹಸ ಇತ್ಯಾದಿ ಸದ್ಗುಣಗಳಿಂದ ಕಂಗೊಳಿಸುತ್ತಿರುವ ಮಹಾತ್ಮರೇ ಭಾರತಮಾತೆಯ ಪುತ್ರರು ; ಇವರೇ ಕರ್ಣಾಟಕ ಮಾತೆಯ ಸಹೋದರರು. ಇಂತಹ ಮಹಾತ್ಮರ ಮಹಿಮೆಯಿಂದಲೇ ಸೂರ್ಯಚಂದ್ರಾದಿಗಳು ತಮ್ಮ ಕರ್ತವ್ಯವನ್ನು ಕ್ರಮವರಿತು ಮಾಡುವರೆಂದರೆ ಅತಿಶಯೋಕ್ತಿಯಾಗಲಾರದು.

ಶ್ಲೋ ॥ ವರಮೇಕೋಪಿ ಗುಣವಾನ್ ನಿರ್ಗುಣಾನಾಂ ಶತಾದಪಿ ।
ಕಾಂತಿವಾನ್ ಶ್ಚಂದ್ರ ಏಕೋಪಿ ನಕ್ಷತ್ರೇಭ್ಯೋತಿರಿಚ್ಯತೇ ॥

ಎಂದು ನೀತಿಶಾಸ್ತ್ರವು ಕೂಗುತ್ತಿದೆ. ಅನೇಕ ನಕ್ಷತ್ರಗಳಿಗಿಂತಲೂ ಒಬ್ಬ ಚಂದ್ರನಲ್ಲಿ ಕಾಂತಿಯು ಹೆಚ್ಚಾಗಿರುವಂತೆ

ನೂರು ಮಂದಿ ಗುಣಹೀನರಿಗಿಂತಲೂ ಒಬ್ಬ ಗುಣವಂತನು ಶ್ರೇಷ್ಠನೆನಿಸಿಕೊಳ್ಳುವನು. ಅಭಿವೃದ್ಧಿಗೆ ಬರಬೇಕೆಂಬ ಒಬ್ಬೊಬ್ಬನಿಗೂ ಗುಣವೇ ಭೂಷಣವು ; ಗುಣವೇ ಆತ್ಮಬಲವು ; ಗುಣವೇ ಸರ್ವಸ್ವವು ; ಗುಣದಿಂದಲೇ ಆತನು ಮುಕ್ತಿಯನ್ನು ಪಡೆಯುವನು. "ಗುಣಹೀನನ ಸಿರಿಗಿಂತಲೂ ಗುಣವಂತನ ಬಡತನವೇ ಲೇಸು" ಎಂದು ಲೋಕವಾರ್ತೆಯುಂಟು. ಬೇಕಾದಷ್ಟು ಐಶ್ವರ್ಯವನ್ನು ಹಾಳುಮಾಡಿದರೂ ಬುದ್ಧಿಶಾಲಿಯಾದವನು ಗುಣವನ್ನು ಕಳೆದುಕೊಳ್ಳಬಾರದು. ಸತ್ತವನ ಆಸ್ತಿಪಾಸ್ತಿಗಳನ್ನು ಮುಂದೆ ಅನುಭವಿಸುವವರು ನೋಡಿಕೊಳ್ಳುವರು. ಆದರೆ, ಇತರರಿಗೆ ಆತನ ಆಸ್ತಿ, ಬಂಧು, ಬಳಗಗಳ ವಿಚಾರಣೆಯು ಬೇಕಾಗಿರುವುದಿಲ್ಲ. ಅವರು ಮೃತನ ಗುಣಗಳನ್ನು ವಿಚಾರಿಸುವರು. ಅಧಮನೆಂದು ತಿಳಿದರೆ ಅನಿಷ್ಟವು ಕಳೆಯಿತೆನ್ನುವರು. ಉತ್ತಮನೆಂದು ತಿಳಿದರೆ ಬಹಳ ಪಶ್ಚಾತ್ತಾಪದಿಂದ, ಕೊಂಡು ಹೋದ ದೇವರನ್ನು ದೂರುವರು. ರಕ್ತಮಾಂಸಗಳಿಂದ ಕೂಡಿದ ದೇಹವು ಕಣ್ಮರೆಯಾದರೂ ಮೃತನ ಜೀವಕಳೆಯು ಅವರ ಮನಸ್ಸನ್ನು ಆಕ್ರಮಿಸುವುದು. ಹೀಗೆ, ಗುಣವಂತನು ಸತ್ತರೂ ಬದುಕಿರುವಂತೆ ಭಾವವು. ಆತನ ಖ್ಯಾತಿಯು ನಾನಾ ರೂಪಗಳಿಂದ ಎಲ್ಲೆಲ್ಲಿಯೂ ಹರಡುವುದು. ಜನರು ಆತನನ್ನು ಭಗವಂತನ ಸ್ವರೂಪವೆಂದು ಭಾವಿಸಿ, ಆತನ ಜ್ಞಾಪಕಾರ್ಥವಾಗಿ ಗುಡಿಗೋಪುರಗಳನ್ನೂ, ಅನ್ನಸತ್ರಗಳನ್ನೂ, ಕೆರೆಕುಂಟೆಗಳನ್ನೂ, ಊರುಕೇರಿಗಳನ್ನೂ ಕಟ್ಟಿಸಿ, ಆತನ ಪ್ರತಿಮೆಗಳನ್ನಿರಿಸಿ, ಮುಂದೆ ಹುಟ್ಟಿ ಬಾಳುವ ಜನರಿಗೂ ಈ ವಿಷಯವು ತಿಳಿಯಲೆಂದು ಹೊತ್ತಗೆಗಳನ್ನು ಬರೆಯಿಸಿ ವಾಗ್ದೇವಿಯಾದ ಶಾರದೆಯ ವಶದಲ್ಲಿಡುವರು. ಜೀವಿ

ತಾಧಿಷ್ಠಾನಕ್ಕೆ ಬೆನ್ನುಮೂಳೆಯ ನಳಿಗೆಯು ಆಧಾರವಾಗಿರು ವಂತೆ, ಸದ್ಗುಣದ ಬಲುಮೆಯಿಂದ ಮನುಷ್ಯನು ಸತ್ಕೀರ್ತಿ ಯನ್ನು ಪಡೆಯುವನು. ಹಿಂದೆ ಹೇಳಿರುವ ಮಹನೀಯರು ಗುಣವಂತರಾಗಿ ಬಾಳಿದುದರಿಂದಲೇ ಅವರ ಖ್ಯಾತಿಯು ಪ್ರಪಂ ಚದಲ್ಲೆಲ್ಲಾ ಹರಡಿತು. ಇಲ್ಲದಿದ್ದರೆ, ಅವರಲ್ಲಿದ್ದ ಅಸಾಧಾ ರಣಶಕ್ತಿಸಾಮರ್ಥ್ಯಗಳಾವುವೂ ಫಲಿಸುತ್ತಿರಲಿಲ್ಲ.

ಸರ್ವಜ್ಞನಾದ ದುರ್ಗುಣಿಗಿಂತಲೂ, ಅಜ್ಞನಾದ ಸುಗು ಣಿಯೇ ಲೋಕಕ್ಕೆಲ್ಲಾ ಸಂತೋಷವನ್ನುಂಟುಮಾಡುವನು. ಈ ಸಂದರ್ಭದಲ್ಲಿ ಸುಭಾಷಿತವೆಂಬ ಗ್ರಂಥದಲ್ಲಿ ಕಂಡುಬರುವ ಒಂದು ಪದ್ಯವನ್ನು ಇಲ್ಲಿ ಬರೆಯುವೆವು.

**ಶ್ಲೋ ॥ ಪಲವೋದನೋದಿ ಮನವಂ ।**
**ಪೊಲಿಗೆಡಿಸಲದೇಕೆ ಕಿರಿದರಿಂ ನಿಜತತ್ವದ ।**
**ನೆಲೆಯುಮನರಿದೊಡೆ ಸಾಲದೆ ।**
**ಸಲೆ ಬೆಳಗುವ ಗಗನದಗಲವೇ ರವಿಬಿಂಬಂ ॥**

ಎಲ್ಲಿಯ ತನಕ ಓದಿದರೂ ತಿಳಿಯಬೇಕಾದ ತತ್ವವು ಒಂದೇ. ಆ ತತ್ವವೇ ಸುಗುಣವೆಂಬುದು ; ವಿನಯವೇ ಸುಗುಣದ ನೆಲೆಗಟ್ಟು. ವಿದ್ಯಾವಿಹೀನರಾದ ಜನರೂ ಉತ್ತ ಮರ ಸಹವಾಸದಿಂದ ವಿನಯವನ್ನು ಅರಿತುಕೊಳ್ಳುವರು. ಆದರೆ, ಪೂರ್ಣವಿದ್ಯಾವಂತರೆಂದು ಹೇಳಿಕೊಳ್ಳುವ ಅನೇಕರಲ್ಲಿ ವಿನಯದ ವಾಸನೆಯೇ ಇರುವುದಿಲ್ಲ. ಬಚ್ಚಲಿನಲ್ಲಿ ನೀರು ತುಂಬಿ ತುಳುಕುತ್ತಿರಬಹುದು ; ಆ ನೀರು ತಿಳಿಯಾದರೇನು ? ಕದಡಿದ್ದರೆ ತಾನೇ ಏನು ? ಕುಡಿಯಲು ಸಾಧ್ಯವಲ್ಲ. ಹೀಗೆ ವಿನಯವಿಲ್ಲದವನ ವಿದ್ಯೆಯು ಶೋಭಿಸಲಾರದು. ಆತನಿಂದ ದೇಶಕ್ಕೆ ಸಂಕಟವುಂಟಾಗುವುದು. ಯಾವ ದೇಶವು ಗುಣವಂ

ತರಾದ ಜನರಿಂದ ತುಂಬಿರುವುದೋ ಆ ದೇಶವು ಯಾವಾಗಲೂ ಶಾಂತಿಗೆ ನೆಲೆಯಾಗಿರುತ್ತದೆ.

ಅತಿ ವಿದ್ಯೆಯಿಂದ ಕೆಲವರಿಗೆ ಗುಣವು ಕೆಟ್ಟುಹೋಗು ವಂತೆಯೇ ಅತ್ಯೈಶ್ವರ್ಯದಿಂದ ಅನೇಕರಲ್ಲಿ ನೀಚಭಾವಗಳು ಉತ್ಪನ್ನವಾಗುವವು. ಪರಮನೀಚನಲ್ಲಿ ಸೇರುವ ದ್ರವ್ಯವು ಜನೋಪಕಾರಕ್ಕೆ ಬದಲಾಗಿ ಜನಾಪಕಾರಕ್ಕಾಗಿ ಕೈಬಿಟ್ಟು ಹೋಗುವುದೆಂದರೆ ಅತಿಶಯೋಕ್ತಿಯಾಗಲಾರದು. ಯಾರು ಅನ್ನ, ಹಣ, ಯೌವನ, ಸ್ತ್ರೀ, ವಿದ್ಯೆ, ಕುಲ, ರೂಪ, ಉದ್ಯೋಗ ಎಂಬೀ ಅಷ್ಟಮದಗಳಿಂದ ಬೀಗಿ ಪವಿತ್ರವಾದ ತಮ್ಮ ಸಂಪತ್ತನ್ನು ನೀಚಕೃತ್ಯಗಳಲ್ಲಿ ಕಳೆಯುವರೋ ಅವರನ್ನು ಲೋಕಕಂಟಕರೆಂದು ಭಾವಿಸಬೇಕಾಗಿದೆ.

**ತ್ರಿ || ಕಣ್ಣು ಮನ ನಾಲಗೆಯು ತನ್ನವೆಂದೆನಬೇಡ |**
**ಅನ್ಯರ ಕೊಂದವೆನಬೇಡ ಇವು ಮೂರು |**
**ತನ್ನ ಕೊಲ್ಲುವುವು ಸರ್ವಜ್ಞ ||**

ಎಂಬದಾಗಿ ಸರ್ವಜ್ಞಮೂರ್ತಿಯು ಹೇಳಿರುವನು. ಮದಾಂಧರಾಗಿ ಕಣ್ಣು, ಮನಸ್ಸು ಮತ್ತು ನಾಲಗೆ ಇವುಗಳನ್ನು ಬಿಗಿಹಿಡಿಯದೆ ಬಿಟ್ಟರೆ ಅವು ಮನುಷ್ಯರಿಗೆ ವಿಶೇಷ ಅನರ್ಥಗಳ ನ್ನುಂಟುಮಾಡುವವು. ಈ ತ್ರಿಕರಣಗಳು ಮನುಷ್ಯನನ್ನು ಸುತ್ತುಗಟ್ಟಿಕೊಂಡಿರುವವು. ದಿವ್ಯದೃಷ್ಟಿಯಿಂದ ಸಂತೋಷವೂ, ಚಪಲದೃಷ್ಟಿಯಿಂದ ಸಂಕಟವೂ ಉಂಟಾಗುವುದು. ಅದರಂತೆ ದೃಢಮನಸ್ಸಿನಿಂದ ಜಯವೂ, ಚಪಲಚಿತ್ತದಿಂದ ಅಪಜಯವೂ ಉಂಟಾಗುವುದು. ಸಂಪತ್ತೂ ಸ್ನೇಹಲಾಭವೂ ನಾಲಗೆಯ ದೆಸೆಯಿಂದಲೇ ; ವಿಪತ್ತಾಗಲಿ, ವೈರವಾಗಲಿ ಉಂಟಾಗಬೇಕಾದರೂ ನಾಲಗೆಯ ದೆಸೆಯಿಂದಲೇ, ಎಂದು

ತಿಳಿಯಬೇಕು. ಈ ಕಣ್ಣು ಮನ ನಾಲಗೆಗಳನ್ನು ದುರುಪ ಯೋಗಪಡಿಸಿ ಮಣ್ಣು ಪಾಲಾಗಿರುವ ಮಾನವರು ತಮ್ಮ ಅವಿ ವೇಕದಿಂದ ಬಹಳ ತೊಂದರೆಗಳಿಗೀಡಾಗಿರುತ್ತಾರೆ. ಆದುದ ರಿಂದ ಇವುಗಳನ್ನು ಹತೋಟಿಗೆ ತಂದು, ಸರಿಯಾದ ದಾರಿ ಯಲ್ಲಿ ನಡೆವುದೇ ಸುಗುಣಿಯ ಕರ್ತವ್ಯವಾಗಿದೆ.

ಸದ್ಗುಣಗಳು ಯಾವುವೆಂದು ವಿವರಿಸುವುದು ಕಷ್ಟವಾ ದರೂ ಏಳಿಗೆಯನ್ನು ಹೊಂದಬೇಕೆಂದು ಬಯಸುವನಲ್ಲಿ ಸತ್ಯ ಸಂಧತೆಯೂ ಪ್ರಾಮಾಣಿಕತೆಯೂ ಪ್ರಬಲವಾಗಿರಬೇಕು. ಸತ್ಯವಂತನಾಗಿರಬೇಕೆಂದು ಹೇಳುವುದು ಸುಲಭವಾದರೂ ಇದ್ದು ತೋರಿಸುವುದು ಶ್ರಮಸಾಧ್ಯವಾದುದು. ಸತ್ಯಪರೀಕ್ಷೆ ಗಾಗಿ ವಿಶ್ವಾಮಿತ್ರ ಋಷಿಯೂ ಶನಿದೇವನೂ ಭರತಖಂಡದ ರಾಜಪುತ್ರರನ್ನು, ವಿವರಿಸಲು ಅಸದಳವಾದ ಕಷ್ಟಕ್ಕೆ ಗುರಿಮಾ ಡಿದರು. ಚಂಡಾಲಕನ್ಯೆಯರನ್ನು ಮದುವೆಯಾದರೆ, ತಾನು ಮೊದಲು ಇಪ್ಪತ್ತು ತಲೆಗಳ ವರೆಗೂ ನರಕಕ್ಕೆ ಹೋಗಬೇಕಾ ಗುವುದೆಂದು ಹೆದರಿ ಹರಿಶ್ಚಂದ್ರನು ಪಟ್ಟ ಪಾಡುಗಳು ಯಾವ ಹಿಂದುವಿಗೆ ತಾನೇ ತಿಳಿಯವು? ಸತಿಪತಿಗಳ ಪರಸ್ಪರಾನುರಾಗ ವನ್ನು ಪರೀಕ್ಷಿಸಲು ಶನಿದೇವನು ನಳಮಹಾರಾಜನನ್ನೂ, ದಮ ಯಂತಿಯನ್ನೂ ವಿಶೇಷ ಸಂಕಟಪಡಿಸಿದನಲ್ಲವೇ? ಒಡ್ಡೋಲ ಗದಲ್ಲಿ ತನ್ನನ್ನು ಜರೆದನೆಂದು ಕೋಪಗೊಂಡು ವಿಕ್ರಮಾರ್ಕ ರಾಯನ ಮದವನ್ನಣಚಿ, ಆತನ ಸತ್ಯಕ್ಕೆ ಭಂಗವನ್ನು ತರಬೇ ಕೆಂದು ಕಲಿಪುರುಷನು ಕಲ್ಪಿಸಿದ ಘೋರ ಸಂಕಟಗಳನ್ನು ಕೇಳಿದ ಮಾತ್ರಕ್ಕೆ ಕಣ್ಣೀರು ಸುರಿಸುವಷ್ಟು ಸಂಕಟವಾಯಿತು. ಆದರೆ ಸತ್ಯಜ್ಞಾನಿಯನ್ನು ಎಲ್ಲರೂ ಸ್ತುತಿಸುವರು. "ಸತ್ಯ ಮೇವ ವದಾಮ್ಯಹಂ" ಎಂಬ ಮಂತ್ರವನ್ನು ಮಾತ್ರ ಜಪಿ

ಸುತ್ತ ಕಪಟಸನ್ಯಾಸಿಯಂತೆ ತಿರುಗುವ ಮನುಷ್ಯನು ಯಾವ ಸತ್ಯಹರಿಶ್ಚಂದ್ರನ ಪಾದಧೂಳಿಯನ್ನೂ ತೆಗೆಯಲು ಅರ್ಹನಲ್ಲ.

---

## ಪ್ರಕರಣ ೭

### ಅವಕಾಶ.

ತಾವು ಅಭಿವೃದ್ಧಿಗೆ ಬರಲು ಅವಕಾಶವೇ ಇಲ್ಲವೆಂದು ಅನೇಕರು ಹೇಳುವರು. ಅವರನ್ನು ಸಾಮಾನ್ಯವಾಗಿ ತಿಳಿಗೇಡಿಗಳೆಂದೇ ಹೇಳಬೇಕಾಗಿದೆ. ಜಡಸ್ವಭಾವವು ಅವರನ್ನು ಆಕ್ರಮಿಸಿರುವುದು. ಅವರು ಪರರ ಆಶ್ರಯವನ್ನು ನಂಬಿ ಸುಖನಿದ್ರೆಯನ್ನು ಮಾಡುವರು. ಅಪರೂಪವಾದ ನರಜನ್ಮದಲ್ಲಿ ಹೇಗೋ ಕಾಲವನ್ನು ತಳ್ಳಿ, ಭೂಮಿಗೆ ಹೊರೆಯಾಗಿ ಸಾಯುವರು. ಮನುಷ್ಯನು ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯಗಳೆಂಬ ಅರಿಷಡ್ವರ್ಗಗಳಿಗೆ ಸೋತು, ಸನ್ಮಾರ್ಗಪ್ರವರ್ತಕನಾಗಬೇಕಾದರೆ ಅವಕಾಶವೇ ಇಲ್ಲವೆಂದು ಹೇಳಿಕೊಳ್ಳುವನು. ಗುಣಶಾಲಿಯನ್ನು ಕಂಡರೆ ಜನರು ದ್ವೇಷಿಸುವುದುಂಟು. ದುಸ್ಸಹವಾಸಕ್ಕಾದರೆ ಅವಕಾಶಗಳು ಎಲ್ಲೆಲ್ಲಿಯೂ ದೊರೆಯುವವು.

ಎಲ್ಲಾ ಮನುಷ್ಯರ ಜೀವಮಾನದಲ್ಲಿಯೂ ಮುಂದುವರಿಯಲು ಅನೇಕ ಅವಕಾಶಗಳು ದೊರೆಯುವವು. "ಅದೃಷ್ಟ"ವೆಂತಲೂ, "ಶುಕ್ರಮಹದ್ದಶೆ" ಎಂತಲೂ ಜನರು ಆಡಿಕೊಳ್ಳುವುದುಂಟು. ಆದರೆ ಅದು ಅದೃಷ್ಟವೂ ಅಲ್ಲ ; ಶುಕ್ರಮಹದ್ದಶೆಯೂ ಅಲ್ಲ ; ಅದೇ ಅವಕಾಶವೆಂಬುದು. ಅವಕಾಶಕ್ಕೆ ಮುಂದಲೆಯಲ್ಲಿ ಜುಟ್ಟಿದೆ. ಅದರ ಹಿಂದಲೆಯು ಬೋಳಾ

ಗಿದೆ. ಏತಕ್ಕೆಂದರೆ ಇದಿರಿಗೆ ಬರುವಾಗಲೇ ಅದನ್ನು ಹಿಡಿದು ನಿಲ್ಲಿಸದೆ ಹೋದರೆ ಅದು ಮುಂದಕ್ಕೆ ಸಾಗಿಹೋಗುವುದು. ಅನಂತರ ಅದರ ಬೋಳು ತಲೆಯನ್ನು ಹಿಡಿಯಲಿಕ್ಕಾಗುವುದಿಲ್ಲ. ಅದು ದೂರವಾಗುವುದು. ಕಡೆಗೆ ಬಾಯಬಿಡಬೇಕಾಗುವುದು. ಪಾಕವು ಮೀರಿದ ಬೆಲ್ಲದಂತೆ ಮನುಷ್ಯನ ಬಾಳು ವ್ಯರ್ಥವಾಗುವುದು.

ತಮಗೆ ಸಿಕ್ಕಿದ ಅವಕಾಶದ ಮುಂಜುಟ್ಟು ಹಿಡಿದು ನಿಲ್ಲಿಸಿ, ತಮ್ಮ ಉದ್ದೇಶವನ್ನು ಸಾಧಿಸುವುದರಲ್ಲಿ ಇಂಗ್ಲೀಷರು ಬಹಳ ಬುದ್ಧಿವಂತರು. ಇದರಿಂದಲೇ ವ್ಯಾಪಾರಕ್ಕಾಗಿ ಈ ದೇಶವನ್ನು ಹೊಕ್ಕ ಅವರು ರಾಜ್ಯಸ್ಥಾಪನೆಯನ್ನು ಮಾಡಿದರು. "ಘೋರಿ" ಸಂತತಿಗೆ ಯಜಮಾನನಾದ ಮಹಮ್ಮದ್ ಘೋರಿಯು ಕಾಲಕ್ಕೆ ಹಿಂದೆ ಹಿಂದೂ ದೇಶದಲ್ಲಿ ಮಹಮ್ಮದೀಯರ ಸುಳಿವೇ ಇರಲಿಲ್ಲ. ಉತ್ತರ ಹಿಂದೂಸ್ಥಾನದಲ್ಲಿ ಜಯಚಂದ್ರ, ಪೃಥ್ವೀರಾಜ ಮೊದಲಾದ ರಾಜಪುತ್ರವೀರರು ಪ್ರಖ್ಯಾತರಾಗಿದ್ದುದರಿಂದ "ಘೋರಿ" ಯು ಹಿಂದೂದೇಶಕ್ಕೆ ಕಾಲಿಡಲು ಅವಕಾಶವಿಲ್ಲದೆ ಕಾಬೂಲಿನಲ್ಲಿಯೇ ಅಡಗಿದ್ದನು. ಕಡೆಗೆ ಪೃಥ್ವೀರಾಜನಿಗೂ, ಜಯಚಂದ್ರನಿಗೂ ಹೆಣ್ಣಿನ ಮಾತಿನಿಂದ ಉಂಟಾದ ಜಗಳದಲ್ಲಿ ಜಯಚಂದ್ರನ ಕಡೆಗೆ ಸೇರಲು ಘೋರಿಗೆ ಅವಕಾಶವು ದೊರೆಯಿತು. ಕೂಡಲೆ ಅವನು ಉಪಾಯದಿಂದ ಪೃಥ್ವೀರಾಜನನ್ನು ಜಯಿಸಿದುದಲ್ಲದೆ, ತನ್ನನ್ನು ಕರೆಸಿದ ಜಯಚಂದ್ರನನ್ನು ಕೊಂದು ತಾನು ದೆಹಲಿಯಲ್ಲಿ ಮೊತ್ತಮೊದಲು ಮಹಮ್ಮದೀಯರ ಧ್ವಜವನ್ನು ಎತ್ತಿಹಿಡಿದನು. ತನಗೆ ಸಿಕ್ಕಿದ ಅವಕಾಶದಲ್ಲಿ ಹಿಂದೂದೇಶವನ್ನೇ ಜಯಿಸಿದ ಆತನು ವೀರನಲ್ಲವೇ ?

ಜಾಣನಾದವನು ತಾನೇ ಅವಕಾಶಗಳನ್ನು ಉಂಟುಮಾಡಿಕೊಳ್ಳಬಲ್ಲನು. ಆತನು ತನ್ನ ಊರ್ಜಿತಸ್ಥಿತಿಗೆ ಮಾರ್ಗವನ್ನು ತಾನೇ ಸರಿಪಡಿಸಿಕೊಳ್ಳುವನು. ಆತನಿಗೆ ತಡೆಗಳಾವುವೂ ಇಲ್ಲ. "ಸರ್ ವಾಲ್ಟರ್ ಸ್ಕಾಟ್" ಎಂಬ ಮಹನೀಯನು ಆಂಗ್ಲೇಯಸಾಹಿತ್ಯಗಗನದಲ್ಲಿ ನಕ್ಷತ್ರದೋಪಾದಿಯಲ್ಲಿ ತಳತಳಿಸುತ್ತಿರುವನಷ್ಟೆ. ಆತನ ಕಾಲದಲ್ಲಿ ಹೊಸ ಕವಿಗಳು ಬರೆದ ಗ್ರಂಥಗಳಿಗೆ ಮರ್ಯಾದೆಯೇ ಇರಲಿಲ್ಲ. ಅದರಿಂದ ಅನೇಕ ಕವಿಗಳು ಪುಸ್ತಕಗಳನ್ನು ಬರೆಯದೆ ಹೆಸರುವಾಸಿಯನ್ನು ಪಡೆಯಲು ತಮಗೆ ಅವಕಾಶವಿಲ್ಲವೆಂದು ಸುಮ್ಮನಾದರು. ಎಂತೆಂತಹ ಕವಿಪುಂಗವರು ಈ ದುರಭಿಪ್ರಾಯದ ಭಯದಿಂದ ಹಾಳಾದರೋ ಊಹಿಸಲಸದಳವಾಗಿದೆ. ಆದರೆ "ಸ್ಕಾಟ್" ರವರು ಬೇರೆ ಒಂದು ಉಪಾಯವನ್ನು ಹುಡುಕಿದರು. "ವೇವರ್ಲಿ" ಎಂಬ ಹೆಸರಿನಿಂದ ಅನೇಕ ನವನ್ಯಾಸಗಳನ್ನು ಬರೆಯತೊಡಗಿದರು. ಜನರು ಅವರ ಶೈಲಿಯ ಸೊಬಗನ್ನೂ, ಕಥೆಯ ರಚನೆಯನ್ನೂ ನೋಡಿ ಯಾವನೋ ಪುರಾತನ ಕವಿಯ ಗ್ರಂಥಗಳೆಂದು ಬೆರಗಾಗಿ ಓದಲು ಪ್ರಾರಂಭಿಸಿದರು. ಕೆಲವು ವರ್ಷಗಳಾದ ಮೇಲೆ, "ವಾಲ್ಟರ್ ಸ್ಕಾಟ್" ರವರೇ ಗ್ರಂಥಕರ್ತರೆಂದು ತಿಳಿದು ಬರಲು, ಜನರು ಅವರನ್ನು ಬಹಳ ಶ್ಲಾಘಿಸಿದರು. ಆತನಿಗೆ ಇಷ್ಟು ಅವಕಾಶವು ದೊರೆತ ವಿಚಿತ್ರವನ್ನು ನೋಡಿರಿ. ಹೀಗೆಯೇ, ಅನೇಕ ಆಂಗ್ಲೇಯ ಗ್ರಂಥಕರ್ತರು ಖ್ಯಾತಿಗೊಂಡಿರುವರು. "ರಿಚ್ಚರ್ಡ್ ಸ್ಟೀಲ್" ಎಂಬುವನು "ಐಸೆಕ್ ಬಿಕ್ಕರ್ ಸ್ಟ್ಯಾಫ್" ಎಂಬ ಹೆಸರಿನಿಂದಲೂ, "ಚಾರ್ಲಸ್ ಲ್ಯಾಂಬ್" ಎಂಬುವನು "ಇಲಿಯ" ಎಂಬ ಹೆಸರಿನಿಂದಲೂ ಪ್ರಹಸನಗಳನ್ನು ಬರೆದು ಸಮಾಜಸುಧಾರಣೆಗೆ

ಬೇಕಾದ ಅವಕಾಶವನ್ನುಂಟುಮಾಡಿಕೊಂಡರು.

ವಿದ್ಯಾಂ ರತ್ನಾನಿ ಧರ್ಮಂಚ ಶೌಚಂ ಶೀಲಂ ಸುಭಾಷಿತಂ ।
ವಿವಿಧಾನಿಚ ಶಿಲ್ಪಾನಿ ಸಮಾದೇಯಾನಿ ಸರ್ವತಂ ॥

ಎಂದು ನೀತಿಶಾಸ್ತ್ರವು ಹೇಳುವುದರಿಂದ ವಿದ್ಯೆ, ಶ್ರೇಷ್ಠ ವಸ್ತು, ಧರ್ಮ, ಆಚಾರ, ಒಳ್ಳೆಯ ನಡತೆ, ಒಳ್ಳೆಯ ಮಾತು, ರಮಣೀಯವಾಗಿ ಶಿಲ್ಪವಿದ್ಯೆ ಇವೇ ಮೊದಲಾದ ಸತ್ಪುರುಷನ ಯೋಗ್ಯವಾದ ಕಾರ್ಯಗಳಿಗೆ ಯಾವೆಡೆಯಲ್ಲಾದರೂ ಅವಕಾಶ ವನ್ನು ಸಂಪಾದಿಸಬಹುದು. ಅವಕಾಶವೇ ಇಲ್ಲವೆಂದು ಕುಳಿ ತರೆ, ಅವು ದೊರೆಯಲಾರವು. ಅವಕಾಶವೆಂಬುದು ಮನು ಷ್ಯನ ಮನೆಯ ಬಾಗಿಲಲ್ಲಿ ಕಾದಿರುವುದಿಲ್ಲ. ಆಂಗ್ಲೇಯ ಕವಿಪುಂಗವನೆನಿಸಿದ "ಷೇಕ್ಸ್‌ಪಿಯರ್" ಎಂಬ ಮಹಾಪುರು ಷನು ಹೇಳಿರುವುದೇನೆಂದರೆ,

There is a tide in the affairs of men,
Which, taken at the flood, leads on to fortune
Omitted, all the voyage of their life,
Is bound in shallows and in miseries.

ಸಮುದ್ರವು ಉಬ್ಬಿರುವಾಗ ದಡವನ್ನು ಬಿಟ್ಟ ಹಡಗು ಆಳವಾದ ನೀರನ್ನು ತೊಂದರೆಯಿಲ್ಲದೆ, ಸೇರಿ, ಮುಂದಿನ ಪ್ರಯಾಣವನ್ನು ಬಳೆಸಲು ಅವಕಾಶವು ಒದಗುವದು. ಸಮು ದ್ರವು ಇಳಿದಿರುವಾಗ ತೀರವನ್ನು ಬಿಟ್ಟ ಹಡಗಿಗೆ ಈ ಅವಕಾ ಶವು ತಪ್ಪಿಹೋಗುವುದು. ನೀರಿನ ಆಳವು ಸಾಲದೆ ಅದು ಬದಿ ಯಲ್ಲಿ ಹೂತುಹೋಗುವುದು. ಮಾನವ ಜನ್ಮವೇ ಅಪಾರವಾದ ಸಾಗರದಂತಿದೆ. ಜನನವೆಂಬ ದಡದಿಂದ ಮರಣವೆಂಬ ದಡಕ್ಕೆ ಈ ಜನ್ಮಸಾಗರದಲ್ಲಿ ಈಸಬೇಕಾಗಿದೆ. ಸಾವಕಾಶ ಮಾಡು

ವವನು ಈ ಸಾಗರದ ಬದಿಯಲ್ಲಿ ಸಿಕ್ಕಿ ದುಃಖಪಡುವನು. ಅವಕಾಶವನ್ನು ಹಿಡಿದು ನಡೆಯುವವನು ಅಭಿವೃದ್ಧಿ ಹೊಂದುವನು. ಅವಕಾಶವು ಬಂದಾಗ ಸಾವಕಾಶ ಮಾಡುವವನ ಬಾಳು ನಾಯ ಬಾಳಿನಂತೆ ಅನ್ಯರ ವಶವಾಗುವುದು. ಮನಸ್ಸಿದ್ದರೆ ಮಾರ್ಗವಿದ್ದೇ ಇರುವುದು. ಮಾರ್ಗವು ಒಳ್ಳೆಯದಾದರೆ ಸುಖಸಂಪದಗಳು ದೊರೆಯುವವು. ಯಾರೇ ಆಗಲಿ ಅವಕಾಶವಿಲ್ಲವೆಂದು ಹಿಂದೆ ನಿಲ್ಲಬಾರದು.

ಪುರುಷಾರ್ಥಂ ಗೆಯ್ಯುತ್ತಿರೆ ।
ಪರಮಾರ್ಥಂ ದೈವಮುಂ ಕೃತಾರ್ಥನ ಮಾಳ್ಕುಂ ॥

ಎಂಬಂತೆ ಭಗವಂತನು ಮೂದೇವಿಗೆ ಅವಕಾಶಗಳನ್ನುಂಟುಮಾಡುವನೆಂಬುದು ನಂಬತಕ್ಕ ಮಾತಲ್ಲ. ಮನುಷ್ಯ ಪ್ರಯತ್ನವನ್ನು ಮನಸ್ಸಿಟ್ಟು ಮಾಡುತ್ತಿದ್ದರೆ, ಭಗವಂತನೂ ಮೆಚ್ಚಿ ಅವನ ಅಭಿವೃದ್ಧಿಗೆ ಅವಕಾಶಗಳನ್ನು ಹೆಚ್ಚು ಹೆಚ್ಚಾಗಿ ಒದಗಿಸಿಕೊಟ್ಟು ಮುದವನ್ನೀಯುವನು.

---

## ಪ್ರಕರಣ ೮.

### ಕಾಲ—ಪಾಲುಮಾರಿಕೆ

ಸಾವಕಾಶ ಮಾಡುವವನಿಗೆ ಅವಕಾಶಗಳು ದೂರವಾಗುವುವೆಂದು ಹಿಂದೆಯೇ ಹೇಳಿದೆ. ಅನೇಕರು ಕಾಲದ ಬೆಲೆಯನ್ನರಿಯದೆ ಅದನ್ನು ದುರುಪಯೋಗಪಡಿಸುತ್ತಿರುವರು. ಕಾಲವು ಒಂದೇ ಸಮನಾಗಿ ಹಿಂದ ಮುಂದ ನೋಡದೆ ಓಡುತ್ತಿರುವುದು. ಅದನ್ನು ಹಿಡಿದು ತಕ್ಕಂತೆ ಉಪಯೋಗಿಸುವ ಶಕ್ತಿಯೂ ಯುಕ್ತಿಯೂ ಯಾವ ಮನುಷ್ಯನಲ್ಲಿಲ್ಲವೋ ಆತನು

ಇಹದಲ್ಲಿ ಅಪಾರವಾದ ಸಂಕಟಕ್ಕೀಡಾಗುವನು. ಕಳೆದು ಕೊಂಡ ಧನವನ್ನು ಕಷ್ಟಪಟ್ಟು ಸಂಪಾದಿಸಬಹುದು. ಕಳೆದು ಕೊಂಡ ಶರೀರಾರೋಗ್ಯವನ್ನು ತಕ್ಕ ವ್ಯಾಯಾಮದಿಂದ ಪಡೆಯಬಹುದು. ಮರೆತುಹೋದ ವಿದ್ಯೆಯನ್ನು ಓದಿ ತಿಳಿಯಬಹುದು. ದೈನ್ಯಭಾವದಿಂದ ಶತ್ರುವನ್ನು ವಶಪಡಿಸಿಕೊಳ್ಳಬಹುದು. ಕಿಡುಕರನ್ನು ಪ್ರೀತಿಯಿಂದ ಜಯಿಸಬಹುದು. ದಾನದಿಂದ ಲೋಭವನ್ನು ಗೆಲ್ಲಬಹುದು. ಸುಳ್ಳನ್ನು ನಿಜದಿಂದ ಗೆಲ್ಲಬಹುದು. ಬಡತನವನ್ನು ಆತ್ಮಾವಲಂಬನೆಯಿಂದ ಹೋಗಲಾಡಿಸಬಹುದು. ಬೀಳು ಭೂಮಿಯನ್ನು ಬೇಸಾಯದಿಂದ ಬೆಳೆಯುವಂತೆ ಮಾಡಬಹುದು. ಬೆಟ್ಟವನ್ನು ಬಟ್ಟಬಯಲು ಮಾಡಬಹುದು. ಹರಿಯುವ ಹೊಳೆಯನ್ನು ತಡೆಯಬಹುದು. ಕಳೆದುಕೊಂಡ ಕಾಲವನ್ನು ಮರಳಿ ಸಂಪಾದಿಸುವುದಕ್ಕಾಗುವುದೇ ಇಲ್ಲ. ಅನೇಕ ವರ್ಷಗಳು ಸೇರಿ ಒಬ್ಬನ ಜೀವಮಾನವೂ, ಅನೇಕ ತಿಂಗಳುಗಳು ಸೇರಿ ಅಂತಹ ವರ್ಷಗಳೂ, ಅನೇಕ ಪಕ್ಷಗಳು ಸೇರಿ ಅಂತಹ ತಿಂಗಳುಗಳೂ, ಅನೇಕ ದಿನಗಳು ಸೇರಿ ಅಂತಹ ಪಕ್ಷಗಳೂ, ಅನೇಕ ಘಂಟೆಗಳು ಸೇರಿ ಅಂತಹ ದಿನಗಳೂ, ಅನೇಕ ನಿಮಿಷಗಳು ಸೇರಿ ಅಂತಹ ಘಂಟೆಗಳೂ, ಅನೇಕ ಸೆಕೆಂಡುಗಳು ಸೇರಿ ಅಂತಹ ನಿಮಿಷಗಳೂ ಆಗಿವೆ. ಹೀಗಿರುವಲ್ಲಿ, ಒಂದು ಕ್ಷಣ ಕಾಲವನ್ನು ಅಸಡ್ಡೆಯಿಂದ ಕಳೆದರೂ ಒಬ್ಬ ಮನುಷ್ಯನ ಜೀವಮಾನದ ಸ್ವಲ್ಪ ಭಾಗವು ಹಾಳಾಗುತ್ತದೆ. ಇಂತಹ ಅನೇಕ ಕ್ಷಣಗಳನ್ನು ಯೋಚನೆ ಮಾಡದೆ ತಾನೇ ತಾನಾಗಿ ಹಾಳುಮಾಡುವ ಮೂಢಮಾನವನು ಈ ಪ್ರಪಂಚದಲ್ಲಿ ತಲೆಯೆತ್ತಲಾರನು.

ಪಾಪಮಯವಾದ ಈ ಜಗತ್ತಿನಲ್ಲಿ ನಿದ್ರೆಯೊಳಗೆ ಮನು

ಷ್ಯನ ಆಯುಸ್ಸಿನ ಅರ್ಧಕಾಲವೂ, ಊಟ ಉಪಚಾರಗಳಿಗೆ ಮಿಕ್ಕ ಅರ್ಧದಲ್ಲಿ ಸ್ವಲ್ಪ ಭಾಗವೂ ಉಪಯೋಗವಾಗುತ್ತದೆ. ಅದನ್ನು ಯಾರೂ ತಪ್ಪಿಸಿ ನಡೆಯಲು ಆಗುವುದಿಲ್ಲ. ಇದರಲ್ಲಿ ಹರಟೆಗಾಗಿ ಕಳೆಯುವ ಕಾಲವು ಬೇರೆ ; ಒಡವೆ ಒಡ್ಯಾಣ ಗಳನ್ನೂ, ಉಡುಪು ಗಿಡುಪುಗಳನ್ನೂ ಧರಿಸುವ ಕಾಲವು ಬೇರೆ ; ಹೀಗೆ ಮನುಷ್ಯನ ಆಯುಸ್ಸಿನಲ್ಲಿ ಎಲ್ಲಾ ಹಾವಭಾವಗಳೂ ಮುಗಿಯುವುದರೊಳಗಾಗಿ ಮರಣಯಾತ್ರೆಯು ಸಿದ್ಧವಾಗು ವುದು. ಇದರಿಂದಲೇ ಲೋಕವಿಖ್ಯಾತನಾದ ಪುರಂದರದಾಸನು ಎಲ್ಲಕ್ಕೂ ಮೂಲಸ್ಥಾನವಾದ ಮನಸ್ಸನ್ನು ಕುರಿತು:—ಎಲೆ ಮನವೇ,

ಕಟ್ಟಿತುಂಬಿದ ಮೇಲೆ ಕ್ಷಣಮಾತ್ರಯಿರವಲ್ಲ ।
ಅಷ್ಟರೊಳು ಪುರಂದರ ವಿಠಲೆನ್ನು ಮನವೇ ॥

ಎಂದು ಉಪದೇಶ ಮಾಡಿರುವನು. ಯಾವ ಮನು ಷ್ಯನು ತನ್ನ ಕೆಲಸವನ್ನು ಮಾಡಲು ಕಾಲವೇ ಇಲ್ಲವೆಂದು ಕೊರ ಗುವನೋ ಆತನು ತನ್ನ ಪವಿತ್ರವಾದ ಕಾಲವನ್ನು ಕೊರಗುವು ದರಲ್ಲಿಯೇ ಕಳೆಯುವನು. ಕೊರಗುವುದಕ್ಕೂ ಕಾಲವು ಬೇಕ ಲ್ಲವೇ ?

ಪ್ರಪಂಚದಲ್ಲಿ ಅಭಿವೃದ್ಧಿಗೆ ಬಂದಿರುವ ಸಕಲ ಮಾನ ವರೂ ಕಾಲವನ್ನು ಪ್ರಾಣಕ್ಕಿಂತಲೂ ಅತಿಶಯವಾಗಿ ಭಾವಿಸಿ, ಅದರಲ್ಲಿ ಕಿಂಚಿತ್ತಾದರೂ ತನಗಲ್ಲದ ಕಾರ್ಯದಲ್ಲಿ ಹಾಳಾಗ ದಂತೆ ನೋಡಿಕೊಂಡಿರುತ್ತಾರೆ. ದೇಶಭಕ್ತರಲ್ಲೆಲ್ಲಾ ಚೂಡಾ ಮಣಿಯಂತೆ ಪ್ರಕಾಶಿಸುತ್ತ, ಭಗವಂತನ ಅವತಾರವೆಂದು ಪೆಸರುವೆತ್ತ ಮಹಾತ್ಮಾ ಕರಮಚಂದ್ ಗಾಂಧಿಯವರು

ದೇಶೋದ್ಧಾರಕ್ಕಾಗಿ ನಡೆಯಿಸಿದ ಕೆಲವು ಕಾರ್ಯಕಲಾಪಗಳಿಗಾಗಿ ಸ್ವಲ್ಪಕಾಲ ಕಾರಾಗೃಹವಾಸ ಮಾಡಬೇಕಾಯಿತು. ಆಗಲೂ ಅವರು ಕಾಲದ ಬೆಲೆಯನ್ನರಿತು ನೂಲುವ ಚರಕವೊಂದನ್ನು ತಮ್ಮ ಬಳಿಯಲ್ಲಿಟ್ಟುಕೊಂಡು ನೂಲುತ್ತಿದ್ದರು. ಉತ್ತಮಗ್ರಂಥಗಳನ್ನೋದುತ್ತಿದ್ದರು. ವಿರಾಮ ಕಾಲದಲ್ಲಿ ದೇಶೋದ್ಧಾರಕ್ಕಾಗಿ ಇತರ ಕಾರ್ಯಗಳನ್ನು ಮಾಡುತ್ತಿದ್ದರು. ಮುಂದೆ ಅವರಿಗೆ ಹೊಟ್ಟೆಯಲ್ಲಿ ಬೆಳೆದುಕೊಂಡಿದ್ದ (Apendicitis) ಎಂಬ ಮೂಳೆಯಿಂದಾದ ನೋವಿಗಾಗಿ ಪ್ರಾಣವೇ ಹೋಗುವ ಹಾಗಾಯಿತು. ಇದನ್ನು ಸೂಕ್ಷ್ಮದೃಷ್ಟಿಯಿಂದರಿತ ಕರ್ನಲ್ ಮ್ಯಾಡ್ಡಾಕ್ ಎಂಬ ಘನ ಆಂಗ್ಲೇಯ ವೈದ್ಯನು ಶಸ್ತ್ರಚಿಕಿತ್ಸೆಯಿಂದ ಗುಣಪಡಿಸಿದನು. ಅದರಿಂದುಂಟಾದ ಬಳಲಿಕೆಗಾಗಿ ಮಹಾತ್ಮಾ ಗಾಂಧಿಯವರು ಕೆಲವುಕಾಲ ಹಾಸಿಗೆಯನ್ನು ಹಿಡಿದು ಮಲಗಿದರು. ಆದರೂ ಅವರು ಓದುವುದನ್ನೇ ಆಗಲಿ, ನೂಲುವುದನ್ನೇ ಆಗಲಿ ಬಿಡಲಿಲ್ಲ. ಅವರಿಗೆ ಆರೋಗ್ಯವು ಕೂಡಿದ ಕೆಲವು ತಿಂಗಳುಗಳ ತರುವಾಯ ಉತ್ತರ ಹಿಂದೂಸ್ಥಾನದ ಕೆಲವು ಭಾಗಗಳಲ್ಲಿ ಹಿಂದುಗಳಿಗೂ, ಮುಸಲ್ಮಾನರಿಗೂ ದೊಡ್ಡ ಹೋರಾಟವುಂಟಾಯಿತು. ಇದನ್ನರಿತ ಆ ಮಹಾತ್ಮರು ಹಿಂದೂ ಮುಸಲ್ಮಾನರ ಐಕಮತ್ಯಕ್ಕಾಗಿ ತಾವು ಮಾಡಿದ ಉಪದೇಶವು ವ್ಯರ್ಥವಾಯಿತೆಂದು ಪಶ್ಚಾತ್ತಾಪಪಟ್ಟು, ಅದಕ್ಕೆ ಶಿಕ್ಷೆಯ ರೂಪವಾಗಿ ತಾವೇ ಇಪ್ಪತ್ತೊಂದು ದಿನ ಉಪವಾಸವಿದ್ದರು. ಈ ಉಪವಾಸ ಕಾಲದಲ್ಲಿ ತನುಗೆ ಮಾತನಾಡಲು ಶಕ್ತಿಯಿಲ್ಲದಂತೆ ತ್ರಾಣವು ತಪ್ಪಿಹೋಯಿತು. ಆದರೂ ಅವರು ನೂಲುವುದನ್ನೂ, ಓದುವುದನ್ನೂ ಬಿಡಲಿಲ್ಲ. ಉತ್ತಮವಾದ ಪೋಷಣೆಯ ಬಲದಿಂದ

ಅವರು ತಮ್ಮ ಉಪವಾಸವ್ರತವನ್ನು ಪೂರಯಿಸಿದ ಬಳಿಕ ಆರೋಗ್ಯವನ್ನು ಪಡೆದರು. ಇದರಿಂದ ತಿಳಿಯಬೇಕಾದ ವಿಷಯವೇನೆಂದರೆ, ಕಾಲವಿಲ್ಲವೆಂದು ಕೊರಗುವವನು ಹೀನಮಾನವನು ; ಕೆಲಸಮಾಡುವವನಿಗೆ ಕಾಲವು ಇದ್ದೇ ಇದೆ. ಎಂತಹ ಪ್ರಾಣಾಪಾಯ ಕಾಲದಲ್ಲಿಯೂ ತಮಗಿದ್ದ ವಿರಾಮವನ್ನು ಮಹಾತ್ಮಾ ಗಾಂಧಿಯವರು ಹೇಗೆ ಉಪಯೋಗಿಸಿದರೆಂಬುದನ್ನು ಮುಖ್ಯವಾಗಿ ತಿಳಿದುನೋಡಬೇಕಾಗಿದೆ.

ದೇಶಭಕ್ತರಲ್ಲೆಲ್ಲಾ ರಾಜನೆಂದು ಖ್ಯಾತಿಹೊಂದಿದ ತಿಲಕಮಹಾಶಯರು ಕಾಲದ ಬೆಲೆಯನ್ನು ಚೆನ್ನಾಗಿ ತಿಳಿದರು. ಇವರು ಒಂದುಸಾರಿ ರಾಜಾಜ್ಞೆಯಂತೆ ಸೆರೆಮನೆಯಲ್ಲಿರಬೇಕಾಯಿತು. ಆಗ ಅವರು "ಗೀತಾರಹಸ್ಯ" ವೆಂಬ ಗ್ರಂಥವನ್ನು ಮರಾಟಿಯಲ್ಲಿ ಬರೆದು ಲೋಕೋಪಕಾರ ಮಾಡಿದರು. ಹೀಗೆಯೇ, "ಜಾರ್ಜ್ ಬುನಿಯನ್" ಎಂಬ ಆಂಗ್ಲೇಯ ಕವಿಯು ಸೆರೆಮನೆಯಲ್ಲಿ "ಪಿಲ್ಗ್ರಿಮ್ಸ್ ಪ್ರೋಗ್ರೆಸ್" ಎಂಬ ಗ್ರಂಥವನ್ನು ಬರೆದನು. ಕರಣಿಕನಾಗಿ ಜೀವನಮಾಡುತ್ತಿದ್ದ "ಚಾರ್ಲ್ಸ್ ಲ್ಯಾಂಬ್" ಎಂಬ ಕವಿಯು ವಿರಾಮಕಾಲದಲ್ಲಿ ಅನೇಕ ಗ್ರಂಥಗಳನ್ನು ಬರೆದನು. ಗಣಿತಶಾಸ್ತ್ರದಲ್ಲಿ ಅಗ್ರೇಸರನೆಂದು ಯೂರೋಪಿನಲ್ಲೆಲ್ಲಾ ಪ್ರಖ್ಯಾತನಾದ ರಾಮಾನುಜಂ ಎಂಬ ಮಹನೀಯನು ಮದರಾಸಿನಲ್ಲೊಂದು ಕಡೆ ಗುಮಾಸ್ತನಾಗಿದ್ದನು. ತನ್ನ ಸಂಸಾರದ ತಾಪತ್ರಯಗಳನ್ನು ಪರಿಹರಿಸಿ, ಗಣಿತಶಾಸ್ತ್ರದಲ್ಲಿ ಪೂರ್ಣಪಾಂಡಿತ್ಯವನ್ನು ಪಡೆಯಲು ಅವಕಾಶವನ್ನುಂಟುಮಾಡಿಕೊಂಡ ಈತನು ಕಾಲವು ಸಾಲದೆಂದು ಕೊರಗುತ್ತಿರಲಿಲ್ಲ.

ಆಲಸ್ಯದಿಂದ ಹೊತ್ತುಮೀರಿ ಬರುವ ವಾಡಿಕೆಯುಳ್ಳವರು ಅನೇಕ ವೇಳೆ ನಗೆಗೀಡಾಗುವುದುಂಟು. ಇಷ್ಟೇ ಅಲ್ಲ. ತಾವು ಮಾಡಬೇಕಾದ ಕೆಲಸವನ್ನು ಕೆಡಿಸಿಕೊಳ್ಳುವರು. ಅನಂತರ ಅದೃಷ್ಟವನ್ನೋ ಹಣೆಯ ಬರಹವನ್ನೋ ದೂರುವರು. ಒಂದುಸಾರಿ ನೆಪೋಲಿಯನ್ ಬೋನಪಾರ್ಟ್ ಎಂಬ ಫ್ರಾನ್ಸ್ ದೇಶದ ಚಕ್ರವರ್ತಿಯು ಕೆಲವು ಮುಖ್ಯಾಧಿಕಾರಿಗಳಿಗೆ ಔತಣಕ್ಕಾಗಿ ಬರುವಂತೆ ಆಹ್ವಾನ ಪತ್ರಿಕೆಗಳನ್ನು ಕಳುಹಿಸಿದ್ದನು. ಆದರೆ, ಅವರು ಗೊತ್ತಾದ ಕಾಲಕ್ಕೆ ಬಾರದೆ ತಡಮಾಡಲು, ಅವರನ್ನೆಲ್ಲಾ ಒಂದುಕಡೆ ಸೇರಿಸಿ "ಅಧಿಕಾರಿಗಳೇ, ಊಟಕ್ಕಾಗಿ ಗೊತ್ತುಮಾಡಿದ ಕಾಲವು ಮೀರಿತು. ಇನ್ನು ಊಟವೆಲ್ಲಿಯದು ? ಮುಂದಣ ಕಾರ್ಯವನ್ನು ನೆರವೇರಿಸೋಣ, ನಡೆಯಿರಿ" ಎಂದು ಹಾಸ್ಯಮಾಡಿದನು. ತಮ್ಮ ಸೋಮಾರಿತನಕ್ಕೆ ಅವರೆಲ್ಲ ನಾಚಿಕೆಗೊಂಡು ಸುಮ್ಮನಾದರು.

"ಬೆಂಜಮಿನ್ ಫ್ರಾನ್ಕ್ಲಿನ್" ಎಂಬ ಅಮೇರಿಕದ ಪ್ರಸಿದ್ಧಪುರುಷನು ಕಾಲವನ್ನು ಬಲು ಎಚ್ಚರಿಕೆಯಿಂದ ಉಪಯೋಗಿಸುತ್ತಿದ್ದನು. ಈತನು "ಫಿಲಡೆಲ್ಫಿಯಾ" ಎಂಬ ಊರಿನಲ್ಲಿ ಪುಸ್ತಕವ್ಯಾಪಾರಿಯಾಗಿದ್ದ ಕಾಲದಲ್ಲಿ ಒಬ್ಬ ಗಿರಾಕಿಯು ಅಲ್ಲಿಗೆ ಬಂದು ಕಾವಲ ಹುಡುಗನನ್ನು ಕುರಿತು ಪುಸ್ತಕದ ಬೆಲೆಯನ್ನು ಕೇಳಿದನು. ಆ ಹುಡುಗನು ಅದರ ಬೆಲೆ ಒಂದು ಡಾಲರೆಂದು ಹೇಳಿದನು. ಬೆಲೆಯು ಹೆಚ್ಚಾಗಿದೆಯೆಂದು ಭಾವಿಸಿ, ಅವನು ಯಜಮಾನನಾದ "ಫ್ರಾನ್ಕ್ಲಿನ್" ನನ್ನು ಬರಮಾಡುವಂತೆ ತಿಳಿಸಿದನು. ಯಜಮಾನನು ಒಳಗಡೆ ಕೆಲಸದಲ್ಲಿರುವುದಾಗಿ ಉತ್ತರ ಬಂದಿತು. ಆದರೆ ಗಿರಾಕಿಯು ಬಲವಂತದಿಂದ ಫ್ರಾನ್ಕ್ಲಿನ್ನನು ಮಾಡುತ್ತಿದ್ದ ಕೆಲಸವನ್ನು

ಬಿಟ್ಟು ಹೊರಗೆ ಬರಬೇಕಾಯಿತು. ಗಿರಾಕಿಯು ಪುಸ್ತಕದ ಬೆಲೆಯನ್ನು ಕೇಳುತ್ತಿರುವನೆಂದು ತಿಳಿದಕೂಡಲೇ ಫ್ರಾಂಕ್ಲಿನ್ನನು ಅದರ ಬೆಲೆ ಒಂದೂವರೆ ಡಾಲರೆಂದು ಹೇಳಿ ಹೊರಡುವುದರಲ್ಲಿದ್ದನು. ಅಷ್ಟರಲ್ಲಿ ಗಿರಾಕಿಯು "ಇದೇನು ! ಈಗತಾನೆ ನಿನ್ನ ಆಳು ಇದಕ್ಕೆ ಒಂದು ಡಾಲರು ಬೆಲೆಯೆಂದು ಹೇಳಿದನಲ್ಲಾ" ಎನ್ನಲು, ಯಜಮಾನನು ಅದರ ಬೆಲೆ ಒಂದೂವರೆ ಡಾಲರೆಂದು ಉತ್ತರಕೊಟ್ಟನು. ಯಜಮಾನನು ತನ್ನನ್ನು ಪರಿಹಾಸ್ಯ ಮಾಡುತ್ತಿರುವನೆಂದು ಭಾವಿಸಿ ಗಿರಾಕಿಯು ಪುನಃ ಅದರ ಬೆಲೆಯನ್ನು ವಿಚಾರಿಸಿದನು. ಫ್ರಾಂಕ್ಲಿನ್ನನು ಸ್ವಲ್ಪ ಯೋಚಿಸಿ "ಅಯ್ಯಾ, ನೀನು ಮೊದಲೇ ಕೊಂಡುಕೊಂಡಿದ್ದರೆ ಅದು ಒಂದು ಡಾಲರಿಗೆ ಸಿಕ್ಕುತ್ತಿದ್ದಿತು. ಆದರೆ, ಈಗ ಅದಕ್ಕಾಗಿ ವ್ಯರ್ಥವಾಗಿ ಕಳೆದ ಕಾಲದ ಬೆಲೆಗಾಗಿ ಇನ್ನರ್ಧ ಡಾಲರು ಹೆಚ್ಚಾಗಿ ಬಿಗಿಯಬೇಕಾಯಿತು" ಎಂದನು. ಗಿರಾಕಿಯು ಮಾತನಾಡಲಿಲ್ಲ. ಒಂದೂವರೆ ಡಾಲರನ್ನು ಕೊಟ್ಟು ಪುಸ್ತಕವನ್ನು ತೆಗೆದುಕೊಂಡನು. ಹೀಗೆ ಕಾಲದ ಬೆಲೆಯನ್ನು ತಿಳಿದವರಿಗೆ ಅದು ಅಮೌಲ್ಯವಾಗಿರುತ್ತದೆ.

### ಕ್ರಮವರಿತು ಕೆಲಸವನ್ನು ಮಾಡು.

ಕ್ರಮತಪ್ಪಿ ಕೆಲಸಮಾಡುವುದರಿಂದ ಕಾಲವು ವ್ಯರ್ಥವಾಗುತ್ತದೆ. ಕ್ರಮತಪ್ಪಿ ನಡೆವುದರಿಂದ ಅನೇಕ ಮಹತ್ಕಾರ್ಯಗಳು ಹಾಳಾಗುವವು. ಮೂರನೆಯ ಪಾಣಿಪಟ್ಟದ ಯುದ್ಧದಲ್ಲಿ ಮರಾಟೆಯವರಿಗೆ ಸೋಲಾದುದು ಅಕ್ರಮದಿಂದಲೇ ; ನಾದಿರ್‌ಷಹನಿಗೆ ದೆಹಲಿಯು ವಶವಾದುದು ಮಹಮ್ಮದ್ ಷಹನ ಅಕ್ರಮದಿಂದಲೇ ; ಶ್ರೀರಂಗಪಟ್ಟಣವು ಇಂಗ್ಲೀಷರ ವಶವಾದುದು ಟೀಪುವಿನ ಅಕ್ರಮದಿಂದಲೇ. ಕ್ರಮದಿಂದ

ಇಂಗ್ಲಿಷರು ಹಿಂದೂದೇಶವನ್ನು ಸಂಪಾದಿಸಿದರು. ಕ್ರಮದಿಂದಲೇ ವಾನರರು ಸಮುದ್ರಕ್ಕೆ ಸೇತುವೆಯನ್ನು ಕಟ್ಟಿದರು. ಹೀಗೆ ಕ್ರಮ, ಅಕ್ರಮಗಳಿಂದ ಮನುಷ್ಯನ ಜಯಾಪಜಯಗಳು ಬದಲಾಯಿಸುತ್ತಿರುವಾಗ ಜನರು ಯಾವ ವಸ್ತುವನ್ನಾಗಲಿ ಕಾರ್ಯವನ್ನಾಗಲಿ ಅಣುವೆಂದೂ ತೃಣವೆಂದೂ ಅಲ್ಲಗಳೆಯದೆ ಕ್ರಮದಿಂದ ಮಾಡಿ ಜಯಿಸಬೇಕು. ಈ ಸಂದರ್ಭದಲ್ಲಿ,

"ಕಾಲೋಚಿತಕ್ಕೈದಿದಾ ತೃಣವೇ ಪರ್ವತವಲ್ಲವೇ"

ಎಂಬ ಸೋಮೇಶ್ವರನ ನುಡಿಗಳನ್ನು ನೆನಪಿನಲ್ಲಿಟ್ಟುಕೊಳ್ಳಬೇಕು. ಮರಳಿನ ಕಣಗಳು ಸೇರಿ ದೊಡ್ಡ ಮರುಭೂಮಿಯಾಯಿತು. ಮಳೆ ಹನಿಗಳು ಸೇರಿ ಅಪಾರವಾದ ಸಾಗರವಾಯಿತು. ಹುಲ್ಲುಕಡ್ಡಿಗಳ ಸಂಯೋಗದಿಂದ ದೊಡ್ಡ ಮೆದೆಯಾಯಿತು. ೧೯೨ ಬಿಡಿ ಕಾಸುಗಳಿಂದ ರೂಪಾಯಾಯಿತು. ಹೀಗಿರುವಾಗ ತೃಣವನ್ನು ಮರೆತರೆ ಘನವು ಕೈಸೇರುವುದಿಲ್ಲ. ಅದರಿಂದ ತೃಣಮಾತ್ರವಾದ ಕೆಲಸವನ್ನಾಗಲಿ ಕ್ರಮತಪ್ಪಿ ಮಾಡಬಾರದು. ಆಯಾಯ ಕೆಲಸಗಳನ್ನು ಆಯಾಯ ಕಾಲಗಳಲ್ಲಿ ಮುಗಿಸಿದರೆ ಮನುಷ್ಯನಿಗೆ ಉತ್ಸಾಹವುಂಟಾಗುವುದು. ಈ ಅಭ್ಯಾಸವು ಬಲಿತಹಾಗೆಲ್ಲಾ ಮುಂದೆ ಆತನು ಲೋಕೋಪಕಾರಮಾಡಲು ಅವಕಾಶವು ಒದಗುವದು. ಪ್ರಪಂಚದಲ್ಲಿ ಕೆಲಸಮಾಡಲು ವಿಶೇಷ ಕುತೂಹಲವುಳ್ಳ ಜನರು ಅನೇಕರಿರುವರು. ಅವರು ಕಾಲವು ಸಾಲದೆಂದು, ಹಿಂದೆ ಹೇಳಿದಂತೆ, ಅನೇಕವೇಳೆ ಕೊರಗುವುದುಂಟು. ಕೆಲಸವನ್ನು ಕ್ರಮತಪ್ಪಿ ಮಾಡುವುದೇ ಇದಕ್ಕೆ ಕಾರಣವಾಗಿದೆ. ಇಪ್ಪತ್ತುನಾಲ್ಕು ಘಂಟೆಗಳ ಅವಧಿಯುಳ್ಳ ಒಂದು ದಿನದಲ್ಲಿ ತಾನು ಮಾಡಬೇಕಾದ ಕೆಲಸಗಳನ್ನು ಕ್ರಮವಾಗಿ ಹಂಚಬೇಕು. ಹಂಚಿರುವ

ಕಾಲದಲ್ಲಿ ಕ್ರಮಪರಿತು ಕೆಲಸವನ್ನು ಮಾಡಿಬಿಡಬೇಕು. ಈಗಿನ ಕಾಲದ ರೈಲುಗಳೂ, ಜಹಜುಗಳೂ, ಪೋಸ್ಟು ಇವೇ ಮೊದಲಾದುವು ಕಾಲಕ್ಕೆ ಸರಿಯಾಗಿ ನಡೆಯದಿದ್ದರೆ ಅವುಗಳ ಕೆಲಸವು ಸರಾಗವಾಗಿ ನಡೆಯುತ್ತಿರಲಿಲ್ಲ. ಮುಂದಿನ ಒಂದು ಸಾರಿ ಕ್ರಮತಪ್ಪಿ ನಡೆದರೆ ಕೆಲಸಗಳೆಲ್ಲವೂ ಮೇಲೆ ಬಂದು ದೊಡ್ಡ ಹೊರೆಯಾಗುವದು. ಹಿಂದೆ ಹೇಳಿದ ಪ್ರಖ್ಯಾತ ಆತ್ಮಾವಲಂಬಿಯೆಂದು ಹೆಸರುಗೊಂಡ ಅಮೇರಿಕದ "ಬೆಂಜಮಿನ್ ಫ್ರಾಂಕ್ಲಿನ್" ಎಂಬುವನು ತನ್ನ ಕಾಲವನ್ನು ಹೀಗೆ ವಿಭಾಗಿಸಿದ್ದನು.

ಪ್ರಾತಃಕಾಲ ೫ ರಿಂದ ೭ ರ ವರೆಗೆ ಪ್ರಶ್ನೆ:—ನಾನು ಈ ದಿನ ಯಾವ ಧರ್ಮಕಾರ್ಯವನ್ನು ಮಾಡಲಿ ?

ಹಾಸಿಗೆಯಿಂದೇಳು, ಕೈಕಾಲುಮುಖಗಳನ್ನು ತೊಳೆದುಕೋ, ದೇವರ ಪ್ರಾರ್ಥನೆಯನ್ನು ಮಾಡು, ಈ ದಿವಸದ ಕೆಲಸವಾವುದೆಂದು ಯೋಚಿಸು, ವ್ಯಾಸಂಗವನ್ನು ಮುಗಿಸು, ಬೆಳಗಿನ ತಿಂಡಿ ತೀರ್ಥಗಳನ್ನು ತೆಗೆದುಕೋ.

ಬೆಳಿಗ್ಗೆ ೮ ರಿಂದ ೧೧ ರ ವರೆಗೆ—ಜೀವನೋಪಾಯದ ಕೆಲಸ. ೧೨ ರಿಂದ ೧|| ರ ವರೆಗೆ—ವ್ಯಾಯಾಮ ಅಥವಾ ಲೆಕ್ಕಪತ್ರಗಳನ್ನು ಅಜಮಾಯಿಷಿ ಮಾಡಿ, ಊಟಮಾಡು.

ಮಧ್ಯಾಹ್ನ ೨ ರಿಂದ ೫ ರ ವರೆಗೆ—ಜೀವನೋಪಾಯದ ಕೆಲಸ. ಸಾಯಂಕಾಲ ೫ ರಿಂದ ೭ ರ ವರೆಗೆ—ವ್ಯಾಯಾಮ. ೭ ರಿಂದ ೯|| ವರೆಗೆ ಕೆಲಸದ ಸಾಮುಗ್ರಿಗಳನ್ನು ಅವುಗಳ ಸ್ಥಳದಲ್ಲಿಡು. ರಾತ್ರಿ ಭೋಜನಮಾಡು, ಸಂಗೀತದಿಂದಾಗಲಿ, ಸಂಭಾಷಣೆಯಿಂದಾಗಲಿ ಮನಸ್ಸನ್ನು ಆನಂದಪಡಿಸು. ಆ ದಿನ

ಮಾಡಿದ ಕೆಲಸಗಳನ್ನು ಯೋಚಿಸಿ ನ್ಯಾಯಾನ್ಯಾಯಗಳನ್ನು ತೀರ್ಮಾನಿಸಿ ಕೆಲಸಗಳನ್ನು ಪುನರಾಲೋಚಿಸು. ೯|| ಇಂದ ೯||| ರ ವರೆಗೆ—ಭಗವಂತನನ್ನು ಪ್ರಾರ್ಥಿಸು. ರಾತ್ರಿ ೧೦ ರಿಂದ ೪|| ರ ವರೆಗೆ—ನಿದ್ರೆಮಾಡು.

ಅನೇಕ ವೇಳೆ ಬುದ್ಧಿವಂತರಾದ ಜನರೂ ಬರುತ್ತೇವೆಂದು ಮಾತುಕೊಟ್ಟು ಬಾರದೆ ಹೋಗುವುದುಂಟು, ಅಥವಾ ಕೆಲಸವು ಮುಗಿದ ಮೇಲೆ ಬರುವುದೂ ಉಂಟು. ಇತರ ಕಾರ್ಯಗಳಿರುವಾಗ ಮಾತುಕೊಡಬಾರದು. ಮಾತು ಕೊಟ್ಟ ಮೇಲೆ ಕಾಲಕ್ಕೆ ಸರಿಯಾಗಿ ಬರಲೇಬೇಕು. ತಡವಾಗುವುದೇ ಆಗಲಿ ಜಾಗ್ರತೆ ಬರುವುದೇ ಆಗಲಿ ತರವಲ್ಲ. ಇದರಿಂದ ಅವರನ್ನು ಜನರು ಹಾಸ್ಯಮಾಡುವರು. ಅವರಲ್ಲಿ ಜನರಿಗೆ ನಂಬಿಕೆಯು ತಪ್ಪುವದು. ಕಡೆಗೆ ಆ ಮಹನೀಯರ ಹೆಸರಿಗೆ ಕುಂದಕವುಂಟಾಗುವುದೂ ಉಂಟು.

ಯಾರೇ ಆಗಲಿ ಪಾಲುಮಾರಿಕೆಯಿಂದ ಕೆಲಸ ಮಾಡಬಾರದು. "ನಾಳೆಯೆಂಬವನ ಮನೆ ಹಾಳು" ಎಂದು ಪ್ರಾಜ್ಞರು ಹೇಳುವುದುಂಟು. ಹಿಂದಿನ ಕೆಲಸವನ್ನು ನಾಳೆ ಮಾಡುವೆನೆಂಬುವನು "ನಾಳೆ" ಎಂಬುದು ಬರುವ ವರೆಗೂ ಕಾದಿರಬೇಕಾಗುವುದು. ನಾಳೆ ಎಂಬುದು ಬರಲಿಲ್ಲ; ಇವನ ಕೆಲಸವು ಮುಗಿಯಲಿಲ್ಲ. ಹೀಗೆ ದಿನೇ ದಿನೇ ಮುಂದುವರಿಯುತ್ತಿರುವ ಜನಕೋಟಿಯ ನಡುವೆ "ನಾಳೆ" ಎಂಬುವನ ಬಾಳು ಹಾಳಾಗುವುದರಲ್ಲಿ ಸಂಶಯವೇ ಇಲ್ಲ.

**ಶ್ಲೋ || ಶ್ವಃಕಾರ್ಯಮದ್ಯ ಕರ್ತವ್ಯಂ ಪೂರ್ವಾಹ್ಣೇ ಚಾಪರಾಹ್ಣಕಂ |**
**ನಹಿ ಪ್ರತೀಕ್ಷತೇ ಮೃತ್ಯುಃ ಕೃತಮಸ್ಯನವಾಕೃತಂ ||**

ಎಂದು ನೀತಿಶಾಸ್ತ್ರವು ಸಾರಿ ಹೇಳುತ್ತದೆ. ನಾಳೆ ಮಾಡುತ್ತೇನೆಂಬ ಕೆಲಸವನ್ನು ಈ ದಿವಸವೇ ಮಾಡಬೇಕು. ಇವನು ಕೆಲಸ ಮಾಡಿದ್ದಾನೆಯೋ ಇಲ್ಲವೋ ಎಂದು ಮೃತ್ಯುವು ನಿರೀಕ್ಷಿಸಿಕೊಂಡಿರುವುದಿಲ್ಲ. ಭಗವಂತನು ಮನುಷ್ಯನಿಗೆ ಕೊಟ್ಟಿರುವ ಅತ್ಯಲ್ಪವಾದ ಆಯುಸ್ಸಿನಲ್ಲಿ ದುರುಪಯೋಗದಿಂದಲೂ ಅಕ್ರಮದಿಂದಲೂ ಸೋಮಾರಿಕೆಯಿಂದಲೂ ಕಾಲವನ್ನು ಮನುಷ್ಯನು ಕಳೆಯುವುದಾದರೆ ಆತನು ಜನ್ಮಸಾರ್ಥಕಗೊಳ್ಳುವುದು ಹೇಗೆ? ಆತನು ಅಭಿವೃದ್ಧಿಗೆ ಬರುವುದು ಹೇಗೆ? ಪಿತ್ರಾರ್ಜಿತವಾದ ಆಸ್ತಿಪಾಸ್ತಿಗಳು ಎಷ್ಟಿದ್ದರೇನು ? ಕೂತುಂಬುವನಿಗೆ ಎಷ್ಟಾದರೂ ಸಾಲದು. ಸೋಮಾರಿಕೆಯಿಂದ ಪ್ರಜೆಗಳು ಹಾಳಾಗುವುದಾದರೆ ದೇಶವು ಅಭಿವೃದ್ಧಿಗೆ ಬರಲಾರದು. ಪರದೇಶದಲ್ಲಿ ರಾಜ್ಯಸ್ಥಾಪನೆ ಮಾಡಿದ ಇಂಗ್ಲೀಷರನ್ನು ನೋಡಿರಿ. ಅವರಿಗೆ ಕಾಲವೆಂಬುದೇ ಜೀವನ. ಅಷ್ಟು ಎಚ್ಚರಿಕೆಯೂ ಅಷ್ಟು ಕಾಲಕ್ರಮವೂ ಎಲ್ಲಿ ಹುಡುಕಿದರೂ ಸಿಕ್ಕದು. ಯಾವ ದೇಶದ ಜನರು ಕಾಲವನ್ನು ಪ್ರಾಣದಂತೆ ತಿಳಿದು ಆಲಸ್ಯವನ್ನು ಬಿಟ್ಟು ಕ್ರಮತಪ್ಪದೆ ಕೆಲಸ ಮಾಡುವರೋ ಅವರು ಸೋಮಾರಿಗಳಾಗಿರುವುದಿಲ್ಲ. ಅವರು ಕಾಲಕ್ರಮೇಣ ಪರದೇಶೀಯರನ್ನು ಮೀರಿಸುವರು. ಆಗ ಎಲ್ಲಾ ಕಾರ್ಯಗಳೂ ಸಾಂಗವಾಗಿ ನೆರವೇರುವವು.

---

## ಪ್ರಕರಣ ೯

### ದಿಟ್ಟತನ—ಕುತೂಹಲ.

ತನ್ನ ಕೆಲಸದಲ್ಲಿ ತನಗೆ ಜಯವಾಗುವುದೆಂಬ ಭರವಸೆಯೂ, ಆ ಕೆಲಸವನ್ನು ಮಾಡುವುದರಲ್ಲಿ ವಿಶೇಷ ಅಪೇಕ್ಷೆಯೂ

ಮನುಷ್ಯನಲ್ಲಿ ಇರಬೇಕು. ಇವುಗಳನ್ನೇ ಜನರು ಕ್ರಮವಾಗಿ ದಿಟ್ಟತನವೆಂತಲೂ, ಕುತೂಹಲವೆಂತಲೂ ಕರೆಯುವರು. ದಿಟ್ಟತನದಿಂದಲೇ ಆಂಜನೇಯನು ಶರಧಿಯನ್ನು ದಾಟಿದನು. ದಿಟ್ಟತನದಿಂದಲೇ ಆ ಮಹಾನುಭಾವನು ಸೂರ್ಯೋದಯವು ಸಮಿಾಪಿಸಿದ್ದರೂ ಲಕ್ಷ್ಮಣನ ಪ್ರಾಣವನ್ನುಳಿಸಲು "ಸಂಜೀವಿನಿ" ಎಂಬ ಮೂಲಿಕೆಯನ್ನು ದೂರದಲ್ಲಿದ್ದ ಚಂದ್ರದ್ರೋಣ ಪರ್ವತದಿಂದ ತರುವ ಕಾರ್ಯದಲ್ಲಿ ಕೈಹಾಕಿದನು. ಅಗ್ನಿ ಪ್ರವೇಶವನ್ನು ಮಾಡಲುದ್ಯುಕ್ತನಾಗಿದ್ದ ಭರತನನ್ನು ಬದುಕಿಸಲು ಇನ್ನೂ ಬಹಳ ದೂರದಲ್ಲಿದ್ದ ಪುಷ್ಪಕವಿಮಾನದಿಂದ ಮುಂದಾಗಿ ಹೊರಟನು. ದಿಟ್ಟತನದಿಂದಲೇ ಅರ್ಜುನನು ಇಂದ್ರಪ್ರಸ್ಥಕ್ಕೂ ಅಮರಾವತಿಗೂ ಸರಳ ಸೇತುವೆಯನ್ನು ಕಟ್ಟುವೆನೆಂದು ಬಾಣವನ್ನೆಸೆದನು. ಮರಾಟೆಯ ಚರಿತ್ರೆಯಲ್ಲೆಲ್ಲಾ ಪ್ರಖ್ಯಾತನಾದ ಶಿವಾಜಿಯು ತನ್ನ ನಾನಾ ಉಪಾಯಗಳಲ್ಲಿ ಪ್ರವೇಶಿಸಿದುದೂ ದಿಟ್ಟತನದಿಂದಲೇ. ಒಮ್ಮೆ ಈತನನ್ನು ಬಿಜಾಪುರದ ಸೇನಾನಾಯಕನಾದ ಅಫಜಲ್‌ಖಾನನು ಕರೆಸಿಕೊಂಡನು. ಬಿಜಾಪುರದವರು ತನಗೆ ವಿರೋಧಿಗಳೆಂದು ತಿಳಿದಿದ್ದ ಶಿವಾಜಿಯು ಅಪರಿಮಿತವಾದ ಅವರ ಸೈನ್ಯವನ್ನು ನೋಡಿ ತಾನು ಏಕಾಂತವಾಗಿ ಅಫಜಲನನ್ನು ಕಾಣುವುದಾಗಿ ಹೇಳಿ ಕಳುಹಿಸಿದನು. ಅದರಂತೆ ಕಂಡು ಮಾತನಾಡುತ್ತಿರುವಾಗ ಅಫಜಲನು ಶಿವಾಜಿಯನ್ನು ಅಲ್ಲಿಯೇ ಕತ್ತರಿಸಬೇಕೆಂದು ತನ್ನ ಹರಿತವಾದ ಕತ್ತಿಯನ್ನು ಶಿವಾಜಿಯ ಕಡೆಗೆ ಬೀಸಿದನು. ಶಿವಾಜಿಯು ಏಟನ್ನು ತಪ್ಪಿಸಿಕೊಂಡು ತನ್ನ ಸೈನ್ಯವು ಚಿಕ್ಕದೆಂದಳುಕದೆ ಹಿಂದೆ ನಿಲ್ಲದೆ ಮುಂದೆ ಸಂಭವಿಸಬಹುದಾದ ತೊಂದರೆಗಳನ್ನು ತಪ್ಪಿಸಬಲ್ಲೆನೆಂಬ ಭರವಸೆಯಿಂದ

ಅಫಜಲನನ್ನು ತನ್ನ ಕೈಯಲ್ಲಿದ್ದ ವ್ಯಾಘ್ರನಖನೆಂಬ ಆಯುಧ ಧಿಂದ ತಿವಿದು ಕೊಂದು ಬಿಟ್ಟನು.

ಇನ್ನೊಂದು ವೇಳೆ ಮೊಗಲರ ಸೇನಾಧಿಪತಿಯಾದ ಷಯಿಸ್ತಾಖಾನನು ಶಿವಾಜಿಯನ್ನು ಜಯಿಸಬೇಕೆಂದು ಚಕ್ರವರ್ತಿಯ ಮಗನೊಡಗೂಡಿ ಪುಣೆಯಲ್ಲಿ ಬಿಡಾರವನ್ನು ಬಿಟ್ಟನು. ಅವನ ಜತೆಯಲ್ಲಿ ಗಣನೆಯಿಲ್ಲದ ಸೈನ್ಯವು ಇದ್ದಿತು. ಶಿವಾಜಿಯು ಇಂತಹ ಸಂದರ್ಭದಲ್ಲಿಯೂ ಆ ಮೊಗಲ್ ಸೇನಾಧಿಪತಿಯನ್ನು ಹೆದರಿಸಬೇಕೆಂದು ಮನಸ್ಸು ಮಾಡಿದನು. ಒಂದು ರಾತ್ರಿ ಮದುವೆಯ ಮೆರವಣಿಗೆಯಲ್ಲಿ ಶಿವಾಜಿ ಸೇರಿ ದಿಟ್ಟತನದಿಂದ ಷಯಿಸ್ತಾಖಾನನ ಬಿಡಾರಕ್ಕೆ ನುಗ್ಗಿ ಆತನ ಬೆರಳನ್ನು ಕತ್ತರಿಸಿ ಓಡಿಸಿದನು.

ಮತ್ತೊಂದು ವೇಳೆ ಮೊಗಲರ ಚಕ್ರವರ್ತಿಯಾಗಿದ್ದ ಅವರಂಗಜೇಬನು ಶಿವಾಜಿಯನ್ನು ದೆಹಲಿಗೆ ಕರೆತರಿಸಿ ಸೆರೆಯಲ್ಲಿಡಿಸಿದನು. ತಪ್ಪಿಸಿಕೊಳ್ಳದಂತೆ ಆತನನ್ನು ಬಹಳ ನಿರ್ಬಂಧದಲ್ಲಿಟ್ಟನು. ಆದರೆ ಶಿವಾಜಿಯಲ್ಲಿ ದಿಟ್ಟತನವೆಂಬುದು ಹುಟ್ಟುಬುದ್ಧಿಯಾಗಿತ್ತು. ಆತನಿಗೆ ಇಂತಹ ಕಷ್ಟದಲ್ಲಿಯೂ ತಪ್ಪಿಸಿಕೊಂಡು ಹೋಗಬಲ್ಲೆನೆಂಬ ಭರವಸೆಯು ಚೆನ್ನಾಗಿದ್ದಿತು. ಅದರಿಂದ ತರಕಾರಿಗಳನ್ನು ತುಂಬಿ ಹೊರುತ್ತಿದ್ದ ಸೇವಕನೊಬ್ಬನ ಅಭಿಮಾನವನ್ನು ಸಂಪಾದಿಸಿ, ದಿಟ್ಟತನದಿಂದ ಆತನ ಬುಟ್ಟಿಯಲ್ಲಿ ತಾನು ಅಡಗಿ, ಸೆರೆಮನೆಯಿಂದ ತಪ್ಪಿಸಿಕೊಂಡು ಹೊರಟುಹೋದನು.

ದಿಟ್ಟತನದಿಂದ ಕೆಲಸಮಾಡುವವನಿಗೆ ಮೊದಲು ಅಸಾಧ್ಯವೆಂದು ತೋರಿದ ಕೆಲಸವು ಕಡೆಗೆ ಸರಾಗವಾಗಿ ನೆರವೇರು

ವುದು. ಆಗ ತನ್ನ ಹಿಂದಿನ ಹೆದರಿಕೆಗೆ ತಾನೇ ನಗುವನು. ದೊಡ್ಡದಾದ ಮನೆಗೆ ತಳಹದಿಯು ಹೇಗೆ ಭದ್ರವಾಗಿರಬೇಕೋ ಹಾಗೆ ಮಹತ್ಕಾರ್ಯಗಳಲ್ಲಿ ಜಯಶೀಲನಾಗಬೇಕಾದರೆ ದಿಟ್ಟತನವಿರಬೇಕು. ದಿಟ್ಟತನವಿಲ್ಲದೆ ಮಾಡಬಹುದಾದ ಕಾರ್ಯವು ಮರಳಿನಲ್ಲಿ ಕಟ್ಟದ ಮನೆಯಂತೆ, ಅಪಾಯದ ಗಂಧವು ಸೋಕಿದೊಡನೆಯೇ ಮಾಯವಾಗುವುದು. ಲೋಕೈಕವೀರನೆಂದು ಖ್ಯಾತಿಪಡೆದ ಫ್ರಾನ್ಸಿನ ಚಕ್ರವರ್ತಿಯಾದ ನೆಪೋಲಿಯನ್ ಬೋನಪಾರ್ಟನು ಹಿಮದಿಂದ ಮುಚ್ಚಿಹೋದ "ಆಲ್ಪ್ಸ್" ಪರ್ವತದ ಮೇಲೆಯೂ, ಪಿರಂಗಿಗಳು ಭೋರ್ಗರೆಯುತ್ತಿದ್ದ ಯುದ್ಧ ಭೂಮಿಯ ಮೇಲೆಯೂ, ತನ್ನ ಸೈನ್ಯವನ್ನು ಅನೇಕ ವೇಳೆ ನಡೆಯಿಸುತ್ತಿದ್ದನು. ಜಯಲಕ್ಷ್ಮಿಯು ಈತನನ್ನು ಒಲಿಯುತ್ತಿದ್ದಳು. ಒಮ್ಮೆ ಯೋಧನೊಬ್ಬನು ಯಾವುದೋ ಕೆಲಸವು ತನ್ನಿಂದಾಗದೆಂದು ನುಡಿಯಲು "ತನ್ನಿಂದಾಗದು" ಎಂಬ ನುಡಿಯು ನಿಘಂಟಿನಲ್ಲಿಯೇ ಇರದಂತೆ ಅಳಿಸಿಹಾಕಬೇಕೆಂತಲೂ, ದಿಟ್ಟತನವೇ ಸಕಲಚರ್ಯಕ್ಕೂ ಮೂಲವೆಂತಲೂ ಉತ್ತರವನ್ನು ಕೊಟ್ಟನು.

ಕೆಲಸವನ್ನು ಮಾಡಿ ಮುಗಿಸುವೆನೆಂಬ ನಂಬುಗೆಯಿಂದ ನಡೆಯುವವನು ಅರೆಗೆಲಸವನ್ನು ಮುಗಿಸಿದಂತೆಯೇ ಭಾವವು. ಎಂತಹ ಅಡಚಣೆಯೂ ಆತನನ್ನ ಹೆದರಿಸಲಾರದು. ಅಡಚಣೆಗಳನ್ನು ಕಡೆದೇಲಿಸುವುದೇ ತನ್ನ ಕರ್ತವ್ಯವೆಂದು ಆತನು ಭಾವಿಸುವನು. ಅನೇಕ ಶಾಸ್ತ್ರ ಪರಿಶೋಧಕರೂ, ಶಿಲ್ಪಿಗಳೂ ದಿಟ್ಟತನದ ಪ್ರಭಾವದಿಂದ ಇತರರು ಅಸಾಧ್ಯವೆಂದು ಬಿಟ್ಟ ಕೆಲಸವನ್ನು ಮಾಡಿ ಮುಗಿಸಿರುವರು. "ಕೊಲಂಬಸ್" ಎಂಬ ಸ್ಪೈಯಿನ್ ದೇಶದ ನಾವಿಕನು ದಿಟ್ಟತನದಿಂದಲೇ ಅಮೇರಿಕವನ್ನು

ಕಂಡು ಹಿಡಿದನು. ಈತನು ತನ್ನ ಕೆಲಸದಲ್ಲಿ ಜಯುವಾಗುತ್ತ ದೆಂದು ನಂಬಿದ್ದುದರಿಂದಲೇ ಯಾರ ಹೇಳಿಕೆಯನ್ನೂ ಕೇಳದೆ ಕಣ್ಮರೆಯಾಗಿದ್ದ ದೇಶವನ್ನು ವಿಶೇಷ ಕಷ್ಟಪಟ್ಟು ಜನರಿಗೆ ತೋರಿಸಿದನು. ಥೇಮ್ಸ್‌ನದಿಯ ಕೆಳಗಡೆ ಕಟ್ಟಿರುವ ಸುರಂಗೆ ಮಾರ್ಗದಲ್ಲಿ ಈಗ ಲಂಡರ್ನ ನಗರವಾಸಿಗಳು ಆಡಂಬರದಿಂದ ತಿರುಗಾಡುತ್ತಿರುವರಷ್ಟೆ ? ಆ ಸುರಂಗವನ್ನು ಕಟ್ಟಲು ಸರ್ ಮಾರ್ಕ್ ಐಸಂಬಾರ್ಡ್ ಬ್ರನೆಲ್ ಎಂಬ ಮಹನೀಯನು ಪಟ್ಟ ಕಷ್ಟವು ಅತಿಶಯವಾದುದು. ಆತನು ೧೮೨೫ ನೆಯ ಮಾರ್ಚಿ ೭ ರಲ್ಲಿ ಕೆಲಸವನ್ನು ಪ್ರಾರಂಭಿಸಿ ೧೮೪೩ ನೆಯ ಮಾರ್ಚಿ ೨೫ ಕ್ಕೆ ಮುಗಿಸಿದನು. ಆಗಿನ ಅನೇಕ ಇಂಜನಿಯರುಗಳು ಅಸಾಧ್ಯವೆಂದು ಬಿಟ್ಟಿದ್ದ ಈ ಅದ್ಭುತಕಾರ್ಯವನ್ನು ಮಾಡುತ್ತಿರುವಾಗ ಕೆಲವು ವೇಳೆ ನದಿಯ ನೀರು ಹಠಾತ್ತಾಗಿ ಒಳಗೆ ನುಗ್ಗಿ ಪ್ರಾಣನಷ್ಟವೂ, ಕಾರ್ಯನಷ್ಟವೂ ಆಯಿತು. ಕೆಲವರು ಈ ಕೆಲಸವನ್ನೇ ನಿಲ್ಲಿಸಬಿಡಬೇಕೆಂದು ದೊರೆಯಲ್ಲಿ ಪಿತೂರಿಯನ್ನು ಹುಟ್ಟಿಸಿದರು. ತನ್ನ ಜಯದಲ್ಲಿ ತನಗೆ ಸಂಪೂರ್ಣ ಭರವಸೆಯಿದ್ದ ಕಾರಣ ಆತನು ಅದನ್ನು ಮಾಡದೆ ಬಿಡಲಿಲ್ಲ.

ಉತ್ತರ ಅಮೇರಿಕದ ಜಾರ್ಜಿಯ ಎಂಬ ಜಿಲ್ಲೆಗೆ ಸೇರಿದ ಡಿಕಾಬ್ ಕೌಂಟಿಯಲ್ಲಿರುವ ಅಟ್ಲಾಂಟ ಎಂಬ ಊರಿನ ಪೂರ್ವಕ್ಕೆ ೬೦ ಮೈಲಿಗಳ ದೂರದಲ್ಲಿ ಒಂದು ದೊಡ್ಡ ಬಂಡೆಯುಂಟು. ಅದರ ಮೇಲುಗಡೆ ಹಿಂದೆ ಅಮೆರಿಕದ ಒಳ ರಾಷ್ಟ್ರದ ಯುದ್ಧದಲ್ಲಿ ಮಡಿದ ಸೈನಿಕರ ಹೆಸರನ್ನೆಲ್ಲಾ ಕೆತ್ತಬೇಕೆಂದು ಸರ್ಕಾರದವರು ಪರ್ಯಾಲೋಚಿಸಿ ಅದಕ್ಕಾಗಿ ೩,೦೦೦,೦೦೦ ಡಾಲರುಗಳನ್ನು ದಯಪಾಲಿಸಿದ್ದರು. ಯಾರೂ ಅತ್ಯದ್ಭುತವಾದ ಆ ಕೆಲಸಕ್ಕೆ ಕೈಹಾಕದೆ ಹೋದರು. ಆದರೆ

ಈಗ "ಗಟ್ಜ಼್‌ಬೋರ್ಗ್ಲಂ" ಎಂಬ ಶಿಲ್ಪಿಯು ಸಂತೋಷದಿಂದ ಆ ಕೆಲಸವನ್ನು ನಡೆಸುತ್ತಿರುವನು. ಆತನ ದಿಟ್ಟತನವು ಸ್ತೋತ್ರಾರ್ಹವಾದುದು.

ಮಹಾತ್ಮಾ ಗಾಂಧಿಯವರು ತಮ್ಮ ತತ್ವವನ್ನು ದಿಟ್ಟತನದಿಂದ ಹಿಡಿದು ನಡೆಯುತ್ತಿರುವರು. ನೂಲುವ ಕೆಲಸದಿಂದ ಸ್ವರಾಜ್ಯವು ಸಿಕ್ಕಲಾರದೆಂದು ಅನೇಕರು ಇವರನ್ನು ಹಿಂದುಗಡೆ ಜರೆಯುತ್ತಿದ್ದರೂ, ತಾವು ಮಾತ್ರ ನೂಲುವ ಕಾರ್ಯದಿಂದಲೇ ಸ್ವರಾಜ್ಯವು ಲಭಿಸುವುದೆಂಬ ನಂಬಿಕೆಯನ್ನು ಭದ್ರಪಡಿಸಿಕೊಂಡು ಸದಾಕಾಲದಲ್ಲಿಯೂ ತಮ್ಮ ತತ್ವವನ್ನು ಇತರರಿಗೆ ಬೋಧಿಸುತ್ತಲೂ, ತಾವೂ ಅದರಂತೆ ನಡೆಯುತ್ತಲೂ ಇರುತ್ತಾರೆ.

ತನ್ನ ಜಯಾಪಜಯುಗಳಲ್ಲಿ ಭರವಸೆಯುಳ್ಳವನು ಇತರರ ದೂಷಣೆಗಳಿಗೆ ಹೆದರುವುದಿಲ್ಲ. ಆತನು ಮನವನ್ನೆಲ್ಲಾ ತನ್ನ ಕಾರ್ಯದ ಮೇಲೆ ನೆಟ್ಟು, ಅದನ್ನು ಈಡೇರಿಸುವುದರಲ್ಲಿಯೇ ಕಾಲವನ್ನು ಕಳೆಯುವನು.

ದಿಟ್ಟತನದಿಂದಲೇ ಸ್ವಾಮಿ ವಿವೇಕಾನಂದಜಿಯವರು ಹಿಂದೂ ಸನಾತನಧರ್ಮವನ್ನು ಪಾಶ್ಚಾತ್ಯದೇಶದಲ್ಲಿ ನೆಲೆಗೊಳಿಸಬೇಕೆಂದು ಸಂಕಲ್ಪಮಾಡಿ ಉತ್ತರ ಅಮೇರಿಕದ ಚಿಕಾಗೋ ಪಟ್ಟಣದಲ್ಲಿ ನಡೆದ ಪ್ರಪಂಚದ ಸಕಲಮತೀಯ ಮುಖಂಡರ ಸಭೆಗೆ ಬಹಳ ಪ್ರಯತ್ನದಿಂದಲೂ, ಕಷ್ಟದಿಂದಲೂ ಸೇರಿದರು. ಆ ಸಭೆಯಲ್ಲಿ ತಾನು ಮಾತನಾಡುವೆನೆಂಬ ಭರವಸೆಯಿಂದ ವಿವೇಕಾನಂದರವರು ಅಧ್ಯಕ್ಷರ ಅಪ್ಪಣೆಯನ್ನು ಕೇಳಿದರು. ಈತನು ಏನು ಮಾತನಾಡುವನೋ ನೋಡೋಣವೆಂದು

ಇವರಿಗೆ ಮಾತನಾಡಲು ಅವಕಾಶವನ್ನು ಕೊಟ್ಟರು. ಕೂಡಲೆ ತಮ್ಮ ವಾಕ್‌ಪ್ರೌಢಿಮೆಯಿಂದ ತಮ್ಮ ಪ್ರತಿಭಾವಿಶೇಷವನ್ನ ಸಭಿಕರ ಮನಸ್ಸಿನಲ್ಲಿ ಬೀರಿ, ಭರತಖಂಡದ ಆರ್ಯಧರ್ಮದ ಶ್ರೇಷ್ಠತೆಯನ್ನು ಎಲ್ಲರಿಗೂ ತಿಳಿಯಪಡಿಸಿದರು. ಇಂತಹ ಮಹಾಪುರುಷರಿಗೆ ಇತರರ ದೂಷಣೆಯ ಭಯವೇತಕ್ಕೆ? ದಿಟ್ಟ ತನದ ಮುಂದೆ ದೂಷಣೆಯು ಎಂದಿಗೂ ನಿಲ್ಲಲಾರದು.

ದಿಟ್ಟತನವು ಮನುಷ್ಯನಿಗೆ ಸಿಂಹದ ಧೈರ್ಯವನ್ನು ಕೊಡುವುದು. ಗಾತ್ರದಲ್ಲಿ ಆನೆಯೇನೋ ಸಿಂಹಕ್ಕಿಂತ ದೊಡ್ಡದು. ಆದರೆ, ಅದಕ್ಕೆ ದಿಟ್ಟತನವಿಲ್ಲದುದರಿಂದ ಒಂದು ಸಿಂಹದ ಮರಿಯು ಮದ್ದಾನೆಗಳ ಗುಂಪನ್ನೇ ಚದರಿಸಿ ಓಡಿಸ ಬಲ್ಲುದು.

ಬೇಕನ್, ಮಿಲ್ಟನ್, ವರ್ಡ್ಸ್‌ವರ್ತ್, ಡ್ಯಾಂಟಿ, ಬಾಬು ಬಂಕಿಮ ಚಂದ್ರ ಚಟ್ಟೋಪಾಧ್ಯಾಯ, ನಾರಣಪ್ಪ, ಲಕ್ಷ್ಮೀಶ, ಕೆಂಪುನಾರಾಯಣ, ಮೊದಲಾದ ಕವಿಕುಲೋತ್ತಮರೂ, ಜ್ಯೂಲಿಯಸ್ ಸೀಸರ್, ಅಲೆಕ್ಸಾಂಡರ್, ನೆಪೋಲಿಯನ್ ಮೊದಲಾದ ಚಕ್ರವರ್ತಿಗಳೂ, ಕ್ಲೈವ್, ಬಿಸ್ಮಾರ್ಕ್, ಡಿಸ್ರೈಲಿ, ಗ್ಲಾಡ್ಸ್‌ಟನ್, ವಾಷಿಂಗ್ಟನ್, ಲಿಂಕನ್, ದಾದಾಬಾಯಿ ನವರೋಜಿ, ಗೋಖಲೆ, ಮಹಾತ್ಮಾಗಾಂಧಿ, ಇವರೇ ಮೊದಲಾದ ದೇಶಸೇವಾಧುರೀಣರೂ ತಮ್ಮ ಶಕ್ತಿಸಾಮರ್ಥ್ಯಗಳಲ್ಲಿ ತಮಗೆ ಸಂಪೂರ್ಣವಾದ ಭರವಸೆಯಿದ್ದುದರಿಂದಲೇ ವಿಶೇಷಪ್ರಾಮುಖ್ಯತೆಯನ್ನು ಪಡೆದರು. ಅವರ ದಿಟ್ಟತನವು ಕಂಡು ಬರುವ ಸಂದರ್ಭಗಳನ್ನು ಆ ಮಹಾತ್ಮರ ಜೀವನಚರಿತ್ರೆಗಳನ್ನು ಓದಿ ತಿಳಿಯಬಹುದು.

ದಿಟ್ಟತನವು ಅನೇಕ ವೇಳೆ ಬಾಲ್ಯದಲ್ಲಿಯೇ ಕಂಡು ಬರುತ್ತದೆ. ತನ್ನ ಕಾಲದ ಮುಖಂಡರಲ್ಲೆಲ್ಲಾ ಮುಂದಾಳಾಗಿ ಮೆರೆಯುತ್ತಿದ್ದ ಜಾನ್‌ಸರ್ ಎಂಬ ಕವಿಯು ದಿಟ್ಟತನದ ಮೂರ್ತಿಯೆಂದು ಹೆಸರು ಪಡೆದಿರುತ್ತಾನೆ. ಈತನು ನಾಲ್ಕು ವರ್ಷದ ಹುಡುಗನಾಗಿದ್ದಾಗಲೇ ಪಾಠಶಾಲೆಗೆ ಹೋಗುತ್ತಿದ್ದನು. ಇವನನ್ನು ಕರೆದು ಕಳುಹಿಸಲು ನಿಯಮಿಸಲ್ಪಟ್ಟ ಚಾಕರನು ಒಂದು ದಿನ ಹೊತ್ತು ಮೀರಿದುದರಿಂದ, ತಾನೊಬ್ಬನೇ ಮಧ್ಯಾಹ್ನದ ವೇಳೆಯಲ್ಲಿ ಸ್ಕೂಲಿನಿಂದ ಮನೆಗೆ ಬರುತ್ತಿದ್ದನು. ಇದನ್ನು ಕಂಡು ಉಪಾಧ್ಯಾಯಿನಿಯು ಹುಡುಗನಿಗೆ ದಾರಿಯಲ್ಲಿ ಅಪಾಯವು ಸಂಭವಿಸೀತೆಂದು ಹೆದರಿ, ಹಿಂದುಗಡೆ ಬರುತ್ತಿದ್ದಳು. ಹುಡುಗನು ಹಿಂದಿರುಗಿ ನೋಡಿದನು. "ನನ್ನ ದೇಹಕ್ಕೆ ನಾನು ಕಾವಲುಗಾರನಾಗಿರುವಾಗ ಈಕೆಯು ನನ್ನನ್ನು ಹಿಂಬಾಲಿಸಿ ಬರುತ್ತಿರುವಳಲ್ಲ" ಎಂದು ಸಿಟ್ಟುಗೊಂಡು ತನ್ನ ಪುಟ್ಟ ಕೈಗಳಿಂದ ಆಕೆಯನ್ನು ಹೊಡೆದನಂತೆ ! ಹೀಗೆ ಮನುಷ್ಯನು ತನ್ನಲ್ಲಿ ಭರವಸೆಯಿಟ್ಟರೆ ಪರಾಧೀನತೆಯು ತಪ್ಪುವುದು. ದಿಟ್ಟತನವಿಲ್ಲದುದೇ ದೊಡ್ಡ ಸೋಮಾರಿತನವಾಗಿದೆ. ದಿಟ್ಟತನವಿದ್ದರೆ "ಕೈಲಾಗದು" ಎಂಬ ಮಾತು ನಿಘಂಟನ್ನು ಬಿಟ್ಟು ಹಾರಿಹೋಗುತ್ತದೆ.

ದಿಟ್ಟತನವೆಂದರೆ ಬೆಟ್ಟದ ತುದಿಯಿಂದ ಕೆಳಕ್ಕೆ ದುಮುಕುವುದಲ್ಲ; ಖಜಾನೆಯ ಬಾಗಿಲನ್ನು ಒಡೆದು ಕದಿಯುವುದಲ್ಲ; ಅನ್ಯಾಯವಾಗಿ ಬಡಬಗ್ಗರನ್ನು ಕೋರ್ಟುಕಛೇರಿಗಳಿಗೆ ಎಳೆದು ಸಂಕಟಪಡಿಸುವುದಲ್ಲ; ದೇಶೀಯರನ್ನು ಭೇದೋಪಾಯಗಳಿಂದ ಜಾತಿಗೆಡಿಸುವುದಲ್ಲ; ಜಾತಿಭೇದವಿಟ್ಟುಕೊಂಡು, ಅಧಿಕಾರ ಬಲದಿಂದ ಜ್ಞಾನಶೂನ್ಯರನ್ನು ಸರ್ಕಾರಿ ಆಡಳಿತಗಳಿಗೆ ತುಂಬು

ವುದಲ್ಲ; ದೇಶಕ್ಕೆ ಬಂದ ಜಾತಿಪದ್ಧತಿಯನ್ನು ಕಾಸಿನಾಸೆಗಾಗಿ ಬಿಡುವುದಲ್ಲ; ತಮ್ಮ ಹೇಳಿಕೆಯನ್ನೇ ಕಾದಿರುವ ಯಜಮಾನರಿಗೆ ಸುಳ್ಳುಸುದ್ದಿಯನ್ನು ಹೇಳಿ, ತಮಗಿಂತ ಉತ್ತಮಸ್ಥಿತಿಯಲ್ಲಿರುವವರನ್ನು ಹಿಂದಕ್ಕೆಳೆಯಿಸುವುದಲ್ಲ; ನಂಬಿದವರಿಗೆ ಮೋಸ ಮಾಡುವುದಲ್ಲ; ಆತ್ಮಗೌರವಕ್ಕೂ, ಪರೋಪಕಾರಕ್ಕೂ ಅನುಕೂಲವಾದ ವಿಷಯಗಳಲ್ಲಿ ದಿಟ್ಟತನವನ್ನು ತೋರಬೇಕು. ಆದರಿಂದ ಖ್ಯಾತಿವಂತನಾಗಬೇಕು.

ದಿಟ್ಟತನವೊಂದಿದ್ದರೆ ಸಾಲದು. ತಕ್ಕಂತೆ ಕಾರ್ಯಕುತೂಹಲವಿರಬೇಕು. ಮನುಷ್ಯನು ಎಲ್ಲಿಗೆ ಹೋದರೂ ಜೀವನ ಮಾಡಬಲ್ಲನು. ಹೀಗಿರದಿರಲು ಮನೆ ಮಠಗಳನ್ನು ಕಳೆದುಕೊಳ್ಳಬಹುದು; ಧನಧಾನ್ಯಗಳನ್ನು ನೀಗಬಹುದು; ರಾಜಶಾಸನಕ್ಕೊಳಗಾಗಬಹುದು. ತನ್ನ ಕಾರ್ಯಕ್ರಮದಲ್ಲಿ ಪೂರ್ಣನಂಬಿಕೆಯೂ ಕುತೂಹಲವೂ ಬೆರೆತರೆ ಭಯವುಂಟಾಗುವುದಿಲ್ಲ. ಉರಿಯುವ ಬೆಂಕಿಯ ಮೇಲೆ ಗಾಳಿ ಬೀಸಿದಂತೆ, ಆತನು ಹಿಡಿದ ಕೆಲಸವನ್ನು ಸುಲಭವಾಗಿ ಮಾಡಬಲ್ಲನು. ಕೆಲಸವು ನಡೆಯುತ್ತಿರುವಾಗ ಮೇಲು ಕೀಳುಗಳನ್ನು ವಿಚಾರಿಸುತ್ತ ನಿಂತರೆ ಉರಿಯುವ ಬೆಂಕಿಗೆ ನೀರ ಹೊಯ್ದಂತಾಗುವುದು. ಉತ್ಸಾಹವಿಲ್ಲದ ದಿಟ್ಟತನವೂ, ದಿಟ್ಟತನವಿಲ್ಲದ ಉತ್ಸಾಹವೂ, ಪುರುಷನಿಲ್ಲದ ಸ್ತ್ರೀಯಂತೆಯೂ, ಸ್ತ್ರೀಯಿಲ್ಲದ ಪುರುಷನಂತೆಯೂ ಈ ವಿಶ್ವನಾಟಕದಲ್ಲಿ ಶೋಭಿಸಲಾರವು.

ಕುತೂಹಲವು ಸೋಮಾರಿಯಾಗಿ ಕುಳಿತಿರುವನಿಗೂ ಹುರಿದುಂಬಿಸುತ್ತದೆ. ಸೈನಿಕರಿಗೆ ಬ್ಯಾಂಡು ಮೊದಲಾದ ವಾದ್ಯಘೋಷಗಳ ರಭಸದಿಂದ ಹುರಿದುಂಬಿಸುತ್ತಾರೆ. ಆಗ ಅವರಿಗೆ ಗೆಲ್ಲುವೆವೆಂಬ ದಿಟ್ಟತನವೂ ಕೊಲ್ಲುವೆವೆಂಬ ಕುತೂಹಲವೂ ಹುಟ್ಟುತ್ತವೆ.

ಕುತೂಹಲವು ಮುದುಕರಿಗೆ ಯುವಕರಂತೆ ಕೆಲಸ ಮಾಡುವ ಶಕ್ತಿಯನ್ನೀಯುತ್ತದೆ. ಇಂಗ್ಲೆಂಡಿನ ಮುತ್ಸಾತ ನೆಂದು ಹೆಸರು ಪಡೆದ ಗ್ಲಾಡ್ಸ್ಟನ್ನರವರೂ, ಭರತಖಂಡದ ದಾದಾಬಾಯಿ ನವರೋಜಿಯವರೂ ಕೇವಲ ವಾರ್ಧಿಕ್ಯದಲ್ಲಿಯೂ ರಾಜ್ಯಾಡಳಿತಗಳಲ್ಲಿ ಹೊಕ್ಕು ಕೆಲಸ ಮಾಡುತ್ತಿದ್ದರು. ಡಾಕ್ಟರ್ ಜಾನ್ಸನ್ನರವರು ತಮ್ಮ ೭೮ ನೆಯ ವಯಸ್ಸಿನಲ್ಲಿ "ಆಂಗ್ಲೇಯ ಕವಿಚರಿತೆ" ಯನ್ನು ಬರೆದರು. ನ್ಯೂಟನ್ನರವರು ತಮ್ಮ ೮೩ನೆ ವರ್ಷದಲ್ಲಿ ಭೌತಿಕಶಾಸ್ತ್ರವನ್ನು ಬರೆದರು. ಡಾಕ್ಟರ್ ಥಾಮಸ್ ಹಾರ್ಡಿಯವರು ತಮ್ಮ ೮೦ ನೆಯ ವರ್ಷದಲ್ಲಿಯೂ ಗ್ರಂಥಗಳನ್ನು ರಚಿಸುತ್ತಿದ್ದರು. ಇದೆಲ್ಲ ಕುತೂಹಲದಿಂದಲೇ. ಡಾಕ್ಟರ್ ಆನಿಬೆಸೆಂಟಮ್ಮನವರೂ, ಸರ್ ಡಿನ್ನಷ ವಾಚರವರೂ ೭೫ ವರ್ಷಗಳು ಮೀರಿದ್ದರೂ, ಕೆಲಸ ಮಾಡುವ ಸಾಮರ್ಥ್ಯ ವನ್ನು ಪಡೆದುದು ಕುತೂಹಲದಿಂದಲೇ. ಕುತೂಹಲವಿಲ್ಲದ ಮನುಜನು ಭೂಮಿಗೆ ಹೊರೆಯಾಗಿ ಸಾಯಬೇಕಾಗುತ್ತದೆ.

ಈ ನರದೇಹವು ಚಕ್ರದ ಬಂಡಿಯಂತಿದೆ. ಚಕ್ರವು ತಿರುಗಬೇಕಾದರೆ ಎಣ್ಣೆಯು ಬೇಕು ; ಕೆಳಕ್ಕೆ ಬೀಳದಿರಬೇಕಾದರೆ ಕಡಾಣಿಯು ಬೇಕು. ದಿಟ್ಟತನವೇ ಎಣ್ಣೆಗೆ ಸಮಾನವಾಗಿದೆ. ಕುತೂಹಲವೇ ಕಡಾಣಿಯಂತಿದೆ. ಹೀಗೆ ಸಿದ್ಧಪಡಿಸಿದ ಬಂಡಿಯನ್ನು ಸರಿಯಾಗಿ ನಡಿಸುವ ಮನುಷ್ಯನು ಮೋಕ್ಷವನ್ನು ಪಡೆಯುವನು. ಇಂತಹ ಬಂಡಿಯು ವೈಕುಂಠವನ್ನು ಅಗತ್ಯವಾಗಿ ಸೇರುತ್ತದೆ. ಆದರೆ,

ಜಗದೊಳು ಜನಿಸಿದ ಮಾನವ ।
ಗಗಧರ ನಿರ್ಣಯಿಪನೊಂದು ವೃತ್ತಿಯನೆಂದುಂ ॥

**ಹಗೆರಣಗೊಳ್ಳದೆ ಮಾನವ ।**
**ಬಗೆಯುತಲದನರಿತು ಬಾಳೆ ಬಪ್ಪುದು ಸೌಖ್ಯಂ ॥**

ಎಂದು ಓರ್ವ ಕವಿಯು ನುಡಿದಿರುತ್ತಾನೆ. ಇಹಲೋಕದಲ್ಲಿ ತನ್ನ ಪಾರುಪತ್ಯವನ್ನರಿತು ಅದನ್ನು ಸಾಂಗವಾಗಿ ನೆರವೇರಿಸಲು ದಿಟ್ಟತನವನ್ನೂ ಕುತೂಹಲವನ್ನೂ ಉಪಯೋಗಗೊಳಿಸಿದರೆ ಅದೀಗ ಯೋಗ್ಯತೆ; ಅದರಿಂದಲೇ ಪೂಜ್ಯತೆ. ಮನುಷ್ಯನ ಬುದ್ಧಿಯು ನಾನಾಮುಖವಾಗಿ ಓಡುತ್ತಿದೆ. ಇದರಲ್ಲಿ ತನಗೊಪ್ಪುವ ಯಾವ ವೃತ್ತಿಯನ್ನಾಗಲಿ, ವಿದ್ಯೆಯನ್ನಾಗಲಿ ಮೊದಲೇ ಚುನಾಯಿಸಿ ತನ್ನ ಬುದ್ಧಿಯನ್ನು ಅದರ ಮೇಲೆ ಓಡಿಸಬೇಕು. ಎಲ್ಲಾ ತೆರದ ವಿದ್ಯೆಯಲ್ಲಿಯೂ ಪಾರಂಗತನಾಗುವೆನೆಂದು ನುಡಿಯುವವನು ಕಡೆಗೆ ಮೋಸಹೋಗುವನು. ನವೀನ ಪ್ರಪಂಚದಲ್ಲಿ ಎಲ್ಲಾ ವಿಷಯದಲ್ಲಿಯೂ ತಕ್ಕ ತಿಳುವಳಿಕೆಯಿರಬೇಕೆಂಬ ಮಾತು ವಪ್ಪತಕ್ಕುದ್ದಾಗಿದೆ. ಆದರೆ, ತನ್ನ ಜೀವನೋಪಾಯಕ್ಕಾಗಲಿ, ದೇಶಸೇವೆಗಾಗಲಿ ಮುಂದಾಲೋಚನೆಯಿಂದ ಯಾವುದಾದರೂ ಒಂದು ವೃತ್ತಿಯನ್ನು ಅವಲಂಬಿಸುವುದು ಒಳ್ಳೆಯದು. ಪೋಪ್ ಎಂಬ ಆಂಗ್ಲೇಯ ಕವಿಯು ಹೀಗೆ ಹೇಳಿರುವನು.—

One science only will one genius fit,
So vast is art, so narrow human wit.

ವಿದ್ಯೆಯು ವಿಶಾಲವಾದುದು. ಅದರಲ್ಲಿ ಯಾವುದೋ ಒಂದು ಭಾಗವನ್ನು ಒಬ್ಬೊಬ್ಬನು ಕಲಿಯಬಹುದು. ವಿದ್ಯಾಧಿದೇವತೆಯಾದ ಶಾರದೆಯೇ ಇನ್ನೂ ಕಲಿಯುತ್ತಿರುವಳೆಂದು ಜನರು ಹೇಳುವುದುಂಟು. ಮರಣಾಧೀನನಾದ ಮಾನವನ ತಿಳುವಳಿಕೆಯು ಎಷ್ಟರದು!

ಮಕ್ಕಳಿಗೆ ಬಾಲ್ಯದಲ್ಲಿಯೇ ತಕ್ಕ ವೃತ್ತಿಯನ್ನು ಚುನಾಯಿಸ ಬೇಕಾದುದು ತಾಯಿತಂದೆಗಳ ಕರ್ತವ್ಯವಾಗಿದೆ. ಆದರೆ ತಾಯಿತಂದೆಗಳೇ ಅನೇಕವೇಳೆ ತಮಗಲ್ಲದ ವೃತ್ತಿಗಳನ್ನು ಅನುಸರಿಸಿ ಹಾಳಾಗುತ್ತಿರುವಾಗ ಅವರು ಮಕ್ಕಳ ವೃತ್ತಿಯನ್ನು ಅರಿತು ನಡೆಯುವುದುಂಟೇ? ಪಾಶ್ಚಾತ್ಯರು ಜಾತಿಭೇದಗಳ ಪ್ರಕಾರ ವೃತ್ತಿಯನ್ನು ಚುನಾಯಿಸುವುದಿಲ್ಲ. ತಮ್ಮ ಮೇಧಾಶಕ್ತಿಯು ಎಳೆಯುವ ಕಡೆಗೆ ತೆರಳುತ್ತಾ ಬರುತ್ತಾರೆ. ಆದುದರಿಂದಲೇ ಈಗ ಅವರು ಸರ್ವತೋಮುಖವಾದ ಪಾಂಡಿತ್ಯವನ್ನು ಪಡೆದಿರುತ್ತಾರೆ. "ಬೆಳೆಯುವ ಪೈರು ಮೊಳಕೆಯಲ್ಲಿಯೇ" ಎಂಬಂತೆ ಯೌವನದ ವೃತ್ತಿಯು ಬಾಲ್ಯದಲ್ಲಿಯೇ ಗೊತ್ತಾಗುತ್ತದೆ. ಅದನ್ನು ತಿಳಿದು ನಡೆದರೆ ಇಹಲೋಕದಲ್ಲಿ ತನ್ನ ಮನೋಗತವನ್ನು ಪೂರಯಿಸಬಹುದು. ಅವಸಾನಕಾಲಕ್ಕೆ ಸರಿಯಾಗಿ ಜೀವಾತ್ಮನು ಬಂಡಿಯನ್ನು ವೈಕುಂಠಕ್ಕೆ ಕೊಂಡೊಯ್ದು ಪರಮಾತ್ಮನ ಸನ್ನಿಧಿಯಲ್ಲಿ ಬಿಡುವನು. ಪದೇ ಪದೇ ಬದಲಾಯಿಸಿ ಜನರು ನಷ್ಟಕ್ಕೀಡಾಗಬೇಕಾಗುವುದು. ಆದರೆ, ಸ್ವಭಾವಜನ್ಯವಾದ ವೃತ್ತಿಯನ್ನು ಅವಲಂಬಿಸಿದ ಮಾನವನು ತನ್ನ ಕರ್ತವ್ಯವನ್ನು ತೃಪ್ತಿಕರವಾಗಿ ನೆರವೇರಿಸುವನು. ಅವನಿಗೆ ಭೂಲೋಕದಲ್ಲಿ ಸ್ವರ್ಗಸುಖವುಂಟಾಗುವುದೆಂದರೆ ಅತಿಶಯೋಕ್ತಿಯಾಗಲಾರದು. ಬಡತನವು ಆತನನ್ನು ಸೋಕುವುದಿಲ್ಲ. ತನ್ನ ವೃತ್ತಿಯಲ್ಲಿ ವಿಶೇಷಾನುಭವವನ್ನು ಪಡೆದು ಇತರರಿಗೆ ಆತನು ಜ್ಞಾನೋಪದೇಶವನ್ನು ಮಾಡಬಹುದು. ಆದುದರಿಂದ, ತನ್ನ ವೃತ್ತಿಯನ್ನು ಎಚ್ಚರಿಕೆಯಿಂದ ಚುನಾಯಿಸಿಕೊಳ್ಳಬೇಕು. ಮೋಸಹೋದ ಮೇಲೆ ಮರುಗುವುದರಿಂದ ಫಲವಿಲ್ಲ.

# ಪ್ರಕರಣ ೧೦.

## ಆತ್ಮಬುದ್ಧಿ-ಮಹಪಪೇಕ್ಷೆ.

ಬುದ್ಧಿರ್ಯಸ್ಯ ಬಲಂ ತಸ್ಯ ಅಬೋಧಸ್ಯ ಕುತೋಬಲಂ ।
ಪಶ್ಯಸಿಂಹೋಮದೋನ್ಮತ್ತ ಶ್ಶಶಕೇನ ನಿಪಾತಿತಃ ॥

ಬುದ್ಧಿವಂತನೇ ಬಲವಂತನು. ಬುದ್ಧಿಯಿಲ್ಲದವನು ಎಷ್ಟು ಬಲಶಾಲಿಯಾಗಿದ್ದರೂ ಪ್ರಯೋಜನವಿಲ್ಲ. ಬಹಳ ಮದದಿಂದ ತಲೆದೂಗುವ ಸಿಂಹವನ್ನು ಅನೇಕ ವೇಳೆ ಕೇವಲ ಸಣ್ಣ ಜಂತುವಾದ ನರಿಯೂ ಉಪಾಯದಿಂದ ಗೆಲ್ಲಬಲ್ಲುದು. ಅನೇಕ ರಾಜರೂ, ಭಾಗ್ಯವಂತರೂ, ದೊಡ್ಡ ಅಧಿಕಾರಿಗಳೂ ತಮಗೆ ನೆರೆಹೊರೆಯ ಸುದ್ದಿಯನ್ನು ತಿಳಿಸುವ ಚಾಡಿಕಾರರನ್ನು ಒಡಗೊಂಡು ಕೊರಗುತ್ತಿರುವರು. ಸಾಮಾನ್ಯ ಜನರಲ್ಲಿಯೂ ಈ ವಾಡಿಕೆ ಕಂಡು ಬರುವುದು. ಯಾವುದಾದರೂ ಒಂದು ಕೆಲಸದಲ್ಲಿ ಕೈಹಾಕಬೇಕಾದರೂ ತನ್ನ ಮುಂದಿನ ವೃತ್ತಿಯನ್ನು ಚುನಾಯಿಸಬೇಕಾದರೂ, ಇತರರ ಮಾತಿನಂತೆ ನಡೆಯಬೇಕೆಂಬ ಬುದ್ಧಿಯು ಜನರಲ್ಲಿ ಚೆನ್ನಾಗಿ ಬೇರೂರಿದೆ. ಈ ಮೂಢಬುದ್ಧಿಯಿಂದ ಜನರು ನಾನಾಮುಖವಾದ ಕಷ್ಟಪರಂಪರೆಗೆ ಸಿಲುಕಿ ನಾಶವಾಗುವರು. ಆತ್ಮಬುದ್ಧಿಯು ಮನುಷ್ಯನಿಗೆ ಸುಖವನ್ನೀಯುತ್ತದೆಂತಲೂ, ಪರಬುದ್ಧಿಯು ವಿನಾಶಕರವಾದುದೆಂತಲೂ, ಸ್ತ್ರೀಬುದ್ಧಿಯು ಪ್ರಳಯಕಾರಿಯೆಂತಲೂ ಸಜ್ಜನರು ಹೇಳುವರು. ಆದುದರಿಂದಲೇ ಪ್ರಖ್ಯಾತ ಕನಕದಾಸನು,- "ಮಡದಿ ನುಡಿಯ ಕೇಳಿ ಜಗಳಕ್ಕೊಬ್ಬರ ಕೂಡೆ ಹೋಗಬಾರದು" ಎಂದು ಹಾಡಿರುವನು. ಈ ಮಧ್ಯೇ ಅನೇಕರು ಬರಿಯ ನಟನೆಯಿಂದಲೇ ಕಾಲಕಳೆಯುವುದುಂಟು. ಅವರು ಬಾಯಿಬಿಟ್ಟರೆ ಬಣ್ಣಗೇಡಾಗುವುದು ನಿಜ; ಕಾರಣಾಂತರದಿಂದ ಅವ

ರು ಅಧಿಕಾರಿಗಳಾಗಿ ಅಥವಾ ಭಾಗ್ಯವಂತರಾಗಿ ಅಥವಾ ಅರಸರಾಗಿ ನಿಂತು, ದೇಶದಲ್ಲಿ ತಾವೂ ಗಣ್ಯಪುರುಷರಾದ ಕಾಲಕ್ಕೆ ತಮ್ಮ ಕಾರ್ಯಭಾರವನ್ನು ಇತರರಿಗೆ ವಹಿಸಿ ಕೊಡುವುದರಲ್ಲಿ ಆಶ್ಚರ್ಯವೇನಿದೆ? "ಕುಂಟಿಯು ನೀರಿಗೆ ಹೋದರೆ ನೆಂಟರೆಂಟುಜನ" ಎಂಬುದರ ನಿಜಾಂಶವು ಇಲ್ಲಿ ವ್ಯಕ್ತವಾಗುತ್ತದೆ. ಬುದ್ಧಿಹೀನರಾದ ಈ ಜನರ ಮಾತಂತಿರಲಿ. ಇವರಿಗಾಗಿ ನಿಂತು ಕೆಲಸಮಾಡುವ ಕೀಳುಜನರು ಕಂಕನರಿಗಳಂತೆ ಎಂಜಲ ಬಾಳಿಗಾಗಿ ಹಿಗ್ಗಿ, ಹುಸಿನುಸುಳನ್ನು ತಮ್ಮ ಯಜಮಾನರಿಗುಸುರಿ, ಸಜ್ಜನರ ಬಾಳನ್ನು ಹಾಳುಮಾಡುವರು. ಹೀಗೆ ಇತರರ ತಾಳಕ್ಕೆ ಸರಿಯಾಗಿ ಕುಣಿಯುವ ಯಜಮಾನರಿಗೆ ಬಹಳ ಗೌರವವು ಬೇಕು. ಕೂತವನಿಗೂ ಕುಣಿದವನಿಗೂ ಎಲ್ಲರಿಗೂ ಗೌರವವು ಬೇಕಲ್ಲವೇ?

ಸುಬುದ್ಧಿಯಿಂದ ಕೆಲಸಮಾಡುವ ಗುಣವು ಅಭ್ಯಾಸದಿಂದ ಬರುತ್ತದೆ. ಶಾಸ್ತ್ರಾಭ್ಯಾಸಮಾಡಬಹುದು; ಶರೀರ ಪುಷ್ಟಿಯನ್ನು ಪಡೆಯಬಹುದು; ರಾಜ್ಯಾಧಿಕಾರಿಯಾಗಬಹುದು. ಆದರೆ, ಬಾಲ್ಯದಿಂದಲೂ ಸ್ವಬುದ್ಧಿಯಿಂದ ಕೆಲಸ ಮಾಡುವ ಗುಣವನ್ನು ಅಭ್ಯಾಸಮಾಡುವುದೆಂದರೆ ಜನರಿಗೆ ಆಗದು. ಹಿಂದಣವರು ಮಾಡಿದಂತೆ ತಾವೂ ಮಾಡಬೇಕೆಂಬ ಬಂಧನಕ್ಕೊಳಗಾಗಿ ಭಗವಂತನು ತಮಗೆ ಕೊಟ್ಟಿರುವ ಅಪೂರ್ವಬುದ್ಧಿಯನ್ನು ಜನರು ಹಾಳುಮಾಡಿಕೊಳ್ಳುವುದುಂಟು. ತನ್ನ ಮುತ್ತಾತನು ಹೊಲದಲ್ಲಿ ಹುರುಳಿಯನ್ನು ಬೆಳೆಯುತ್ತಿದ್ದನೆಂದು ತಾನೂ ಹುರುಳಿಯನ್ನೇ ಬೆಳಯಬೇಕಾದುದಿಲ್ಲ. "ಹೊತ್ತು ಮುಳುಗಿದ ಕಡೆ ತಂಗು" ಎಂದು ತಾಯಿಯು ಹೇಳಿದಮಾತ್ರಕ್ಕೆ ಹೊತ್ತು ಮುಳುಗಿತೆಂದು ತಿಪ್ಪೆಯ ಮೇಲೆ

ತಂಗುವುದು ಉಚಿತವೇ? ಸಮುದ್ರಯಾನವು ತಪ್ಪೆಂದು ಜನ ರಾಡಿಕೊಂಡ ಮಾತ್ರಕ್ಕೆ ಸಮುದ್ರವನ್ನು ದಾಟಿ ದೂರದೇಶ ಗಳೊಡನೆ ವ್ಯಾಪಾರ ಮೊದಲಾದುವುಗಳ ಮೂಲಕ ಸಂಬಂಧ ವನ್ನು ಬಳೆಯಿಸದಿರುವುದು ಧರ್ಮವಲ್ಲ. ವಿಗ್ರಹಾರಾಧನೆಯು ತಪ್ಪೆಂದು ಇತರರು ನುಡಿದ ಮಾತ್ರಕ್ಕೆ ಗುಡಿಗೋಪುರಗಳನ್ನು ನೆಲಸಮಮಾಡಿ ಕೈಕಟ್ಟಿ ನಿಲ್ಲುವುದು ಜಾಣತನವಲ್ಲ. ಕೆಟ್ಟ ಮೇಲೆ ಬುದ್ಧಿಬರುವುದೆಂದು ಜನರು ಹೇಳಬಹುದು. ಆದರೆ ಕೆಡುವುದಕ್ಕಿಂತ ಮೊದಲೇ ಮುಂದಾಲೋಚನೆಯಿರಬೇಕು. ಇದಕ್ಕಾಗಿ ತನ್ನ ಕಾರ್ಯವನ್ನು ತಾನೇ ಯೋಚಿಸಿ ಮಾಡುವ ಅ ಭ್ಯಾಸವನ್ನು ಪಡೆದು, ಆತ್ಮಬುದ್ಧಿಯನ್ನು ವೃದ್ಧಿಗೆ ತರಬೇಕು.

ಏಬ್ರಾಮ್‌ಲಿಂಕನ್, ಡಿಸ್ಕಾರ್ಟೀಸ್, ಅಕ್ಬರ್, ಜಾಲ್ಬಾಯ್ ದೋರಾಬ್ಜಿ ಬರ್ದ ಮೊದಲಾದ ಮಹನೀಯರ ಜೀವನ ಚರಿತೆಗಳು ಅವರಲ್ಲಿದ್ದ ಆತ್ಮಬುದ್ಧಿಯ ಮಹಿಮೆಯಿಂದ ಸ್ತುತ್ಯರ್ಹವಾಗಿವೆ. ಗುಲಾಮರ ಮಾರಾಟವು ಬೇಕೆಂದು ದೇಶವೆಲ್ಲಾ ಕೂಗುತ್ತಿದ್ದರೂ, ತನಗೆ ಮಾತ್ರ ಅದು ಸರಿಬೀಳದೆ ಹೋದಕಾರಣ ಲಿಂಕನ್‌ರವರು ಅಮೇರಿಕದ ಸಂಯುಕ್ತ ಸಂಸ್ಥಾನದ ಕಾಂಗ್ರೆಸ್ಸಿನಲ್ಲಿಯೂ ಆ ದುರಾಚಾರವನ್ನು ಖಂಡಿಸಿ ಮಾತನಾಡಿದರು. ಡಿಸ್ಕಾರ್ಟೀಸ್ ಎಂಬುವನು ಪುರಾತನರ ನುಡಿಗಳನ್ನೇ ವೇದವಾಕ್ಯವೆಂದು ನಂಬದೆ ಹಗಲಿ ರುಳೂ ತಾನೊಬ್ಬನೇ ಯೋಚಿಸತೊಡಗಿ ಹೊಸದಾದ ತತ್ವ ಶಾಸ್ತ್ರವನ್ನೂ, ರೇಖಾಗಣಿತವನ್ನೂ ಬರೆದು ಲೋಕವಿಖ್ಯಾತ ನಾದನು. ಸರ್ ಐಸಾಕ್ ನ್ಯೂಟನ್, ಸರ್ ಹಂಫ್ರಿ ಡೇವಿ, ಜಾರ್ಜ್ ಡಾಲ್ಟನ್, ಮೈಕೇಲ್ ಫ್ಯಾರಡೆ ಇವರೇ ಮೊದಲಾದ ಭೌತಿಕ ಮತ್ತು ರಸಾಯನ ಶಾಸ್ತ್ರಜ್ಞರು ಆತ್ಮಬುದ್ಧಿಯಿಂದ

ಲೇ ಹೊಸಹೊಸ ವಿಷಯಗಳನ್ನು ಕಂಡು ಹಿಡಿಯಲು ಶಕ್ತರಾದರು. ತನ್ನ ಮಾವನಾದ ಬೈರಾಮುಖಾನನು ಸೆರೆ ಸಿಕ್ಕಿದ ಹೀಮೂವಿನ ಶಿರಚ್ಛೇದನ ಮಾಡುವಂತೆ ಅಕ್ಬರ್ ಪಾದಷಹನಿಗೆ ಹೇಳಿದಾಗ ಪಾದಷಹನು ಮರುಳಾಗದೆ, ಅದು ತನ್ನಿಂದಾಗದ ಕೆಲಸವೆಂದು ಹೇಳಿಬಿಟ್ಟನು. ದೋರಾಬ್ಜಿ ಬರ್ದಿ ಎಂಬ ಮಹನೀಯನು ಬೊಂಬಾಯಿಯ ಹೊಸ ಹೈಸ್ಕೂಲಿನಲ್ಲಿ ಸ್ಥಾಪಕನೆಂದು ಹೆಸರುಗೊಂಡಿರುವನು. ಇವನು ಪ್ರೌಢ ವಿದ್ಯಾಭ್ಯಾಸದ ಪ್ರಥಮ ತರಗತಿಯಲ್ಲಿ ತೇರ್ಗಡೆಯನ್ನು ಪಡೆದು, ಬೊಂಬಾಯಿಯ ಕೋಟೆ ಹೈಸ್ಕೂಲಿನಲ್ಲಿ ಉಪಾಧ್ಯಾಯನಾದನು. ಆ ಹೈಸ್ಕೂಲಿನ ಪದ್ಧತಿಯು ಈತನ ಆತ್ಮಸಾಕ್ಷಿಗೆ ವಿರುದ್ಧವಾಗಿದ್ದುದರಿಂದ ಕೂಡಲೇ ಆತನು ಕೆಲಸವನ್ನು ಬಿಟ್ಟು ತನ್ನ ಸ್ನೇಹಿತನ ಸಹಾಯದಿಂದ ಮೇಲೆ ಹೇಳಿದ ಹೊಸ ಹೈಸ್ಕೂಲನ್ನು ಸ್ಥಾಪಿಸಿ ಸಾಹಸದಿಂದ ಕೆಲಸಮಾಡುತ್ತ ತನ್ನ ಹೈಸ್ಕೂಲನ್ನು ಬೊಂಬಾಯಲ್ಲೆಲ್ಲಾ ಪ್ರಸಿದ್ಧಪಡಿಸಿ ದೈವಾಧೀನನಾದನು. ಜ್ಞಾನಬಲದಿಂದ ಹೊಸ ವಿಷಯಗಳನ್ನು ತಿಳಿಯುವುದೇ ಪ್ರಪಂಚದ ಲಕ್ಷಣವಾಗಿದೆ. ಆಲೋಚನಾಶಕ್ತಿಯನ್ನು ಹಾಳುಮಾಡಿಕೊಂಡು ಮೂದೇವಿಯಂತೆ ಮನೆಯಲ್ಲಿ ಕುಳಿತರೆ ಜನರು ಮುಂದುವರಿವುದು ಹೇಗೆ? ಮನುಷ್ಯನಿಗೆ ಅತೃಪ್ತಿಯು ಹುಟ್ಟದರೆ ಆಗ ಆತನು ತನಗೆ ಆವಶ್ಯಕವಾದ ವಿಷಯಗಳನ್ನು ಕಂಡುಹಿಡಿಯಲು ಹೊರಡುವನು. ಈ ರೀತಿಯಲ್ಲಿ ಆತನ ಅಲ್ಪ ಮೇಧಾಶಕ್ತಿಗೆ ಕೆಲಸವು ದೊರೆತು ಅದು ಪ್ರಕಾಶಕ್ಕೆ ಬರುವುದು. ಇದರಿಂದ ಆತನಿಗೆ ಮಹದಭಿಲಾಷೆಯು ಉದ್ಭವಿಸುವುದು. ಆದರೆ ಈ ಸಂದರ್ಭದಲ್ಲಿ ಅತೃಪ್ತಿಗೂ, ಮಹದಭಿಲಾಷೆಗೂ, ದುರಾಶೆಗೂ ಇರುವ ತಾರತಮ್ಯವನ್ನು ತಿಳಿಯ

ಬೇಕು. ಅತೃಪ್ತಿಯೆಂದರೆ, ಹಿಂದೆ ಹೇಳಿದಂತೆ ತಾಸಿರುವ ಸ್ಥಿತಿಯಲ್ಲಿ ತೃಪ್ತನಾಗದೆ ಅಭಿವೃದ್ಧಿಗೆ ಬರಬೇಕೆಂಬ ಕಾಂಕ್ಷೆ ಯೆಂದರ್ಥವಾಗುವುದು. ಆದರೆ ಅತೃಪ್ತಿಯು ದೆಸೆಯಿಂದ ಮಹದಭಿಲಾಷೆ ಎಂದರೆ, ಏಳಿಗೆಯ ಬಯಕೆಯುಂಟಾಗದೆ ಹೋದರೆ, ಆ ಅತೃಪ್ತಿಯು ದುರಾಶೆಯನ್ನುಂಟುಮಾಡುವುದು. ಆಗ ಮನುಷ್ಯನು ನಷ್ಟಭಾಗಿಯಾಗುವನು. ಇದಕ್ಕಾಗಿ ಇಲ್ಲಿ ಚಿಕ್ಕ ಕಥೆಯನ್ನು ಹೇಳುವೆವು. ಮೈದಾಸನೆಂಬ ದೊರೆಯು ಬಲು ಹಣಗಾರನು ; ತನ್ನ ಬಂಡಾರದಲ್ಲಿದ್ದ ಚಿನ್ನವು ಸಾಲ ದೆಂದು ಅವನು ಗೊಣಗುಟ್ಟುತ್ತಿದ್ದನು. ಆದರೆ ಅವನ ಅತೃ ಪ್ತಿಯು ದುರಾಶೆಯಾಗಿ ಪರಿಣಮಿಸಿತು. ಒಂದು ದಿನ ಭಗ ವಂತನು ಪ್ರತ್ಯಕ್ಷನಾಗಿ ತನಗೆ ಬೇಕಾದ ವರವನ್ನು ಕೊಡುವೆ ನೆನಲು ಮೈದಾಸನು "ನಾನು ಮುಟ್ಟಿದುದೆಲ್ಲಾ ಚಿನ್ನವಾಗಲಿ" ಎಂದು ಕೇಳಿದನು. ಸ್ವಾಮಿಯು ಅದನ್ನು ಕೇಳಿ ನಕ್ಕು ಹಾಗೆಯೇ ವರವನ್ನು ಕೊಟ್ಟನು. ಕೂಡಲೇ ಅನ್ನಾಹಾರಗಳು ಚಿನ್ನವಾದುವು. ಪ್ರೇಮಪಾತ್ರವಾದ ಮಗಳೂ ಚಿನ್ನದ ಬೊಂಬೆ ಯಾದಳು. ಮೈದಾಸನಿಗೆ ಹಸಿವು ಬಾಯಾರಿಕೆಗಳು ಹೆಚ್ಚಿ ದುವು. ಸಂಕಟವೂ ಹೆಚ್ಚಿತು. ಮುಟ್ಟಿದುದೆಲ್ಲಾ ಚಿನ್ನವಾ ದರೆ ತಾನು ಜೀವಿಸುವುದು ಹೇಗೆಂಬುದು ಆಗ ಅವನಿಗೆ ತಿಳಿ ಯಿತು. ಕೂಡಲೇ ಭಗವಂತನು ತನ್ನ ವರವನ್ನು ಹಿಂದಕ್ಕೆ ಪಡೆದು ಅತಿ ಆಸೆಯಿಂದ ಗತಿಗೇಡೆಂಬ ವಿಷಯವನ್ನು ಆತನಿಗೆ ತಿಳಿಯಪಡಿಸಿದನು.

ಅತೃಪ್ತಿಯೇನೋ ಒಳ್ಳೆಯ ಗುಣವೇ ಸರಿ. ಮನು ಷ್ಯನು ಅಭಿವೃದ್ಧಿಗೆ ಬರಲು ಅದು ಉತ್ತೇಜನಕಾರಿಯಾಗಿದೆ. ಆದರೆ, ಅತೃಪ್ತಿಯು ದುರಾಶೆಯಾದರೆ, ಮೇಲೆ ಹೇಳಿದಂತೆ

ಕೇಡುಂಟಾಗುತ್ತದೆ. ಜಾರ್ಜ್ ಸ್ಟೀವರ್ಸನ್ನನು, ಹೊಗೆಯ ಬಂಡಿಯನ್ನು ಮಾಡಿದನು. ಕೊಲಂಬಸ್ಸನು ಅಮೇರಿಕಾ ಖಂಡವನ್ನು ಕಂಡುಹಿಡಿದನು. ಗ್ಯಾಲಿಲಿಯೋ ಎಂಬುವನು ಭೂಮಿಯು ಬುಗುರಿಯಂತೆ ಸುತ್ತುತ್ತದೆಯೆಂದನು. ಎಲಿಯಸ್ ಹೂವೆ ಎಂಬುವನು ಬಟ್ಟೆಹೊಲಿಯುವ ಯಂತ್ರವನ್ನು ಮಾಡಿದನು. ಇದಕ್ಕೆಲ್ಲಾ ಅತೃಪ್ತಿಯೇ ಕಾರಣವಾಗಿದೆ. ಅವರು ಹಿರಿಯರ ಜ್ಞಾನವನ್ನು ತಿಳಿದು ಅಷ್ಟಕ್ಕೇ ತೃಪ್ತರಾಗದೆ ತಮ್ಮ ಆಲೋಚನಾಶಕ್ತಿಯ ಬಲದಿಂದ ಮಹತ್ಕಾರ್ಯಗಳಲ್ಲಿ ಅಭಿಲಾಷೆಯನ್ನು ಪಡೆದು ಜಗದ್ವಿಖ್ಯಾತರಾದರು.

ತಾನಿರುವ ಸ್ಥಿತಿಯನ್ನು ಬಿಟ್ಟು ಉನ್ನತಸ್ಥಿತಿಗೆ ಹೇಗೆ ಬರಬಹುದೆಂಬ ವಿಷಯವನ್ನು ಮನುಷ್ಯನು ಹಗಲೂ ಇರುಳೂ ಯೋಚಿಸಬೇಕು. ಈ ವಿಧವಾದ ಚಿಂತನೆಯು ಕಡೆಗೆ ಯಾವುದಾದರೂ ಒಂದು ಮಾರ್ಗವನ್ನು ತೋರಿಸುತ್ತದೆ. ಮಾರ್ಗವನ್ನು ಕಂಡ ಬಳಿಕ ಅದರಲ್ಲಿ ಸಾಗಿಹೋಗದೆ ನಿಂತರೆ, ಭಗವಂತನು ಮೆಚ್ಚಲಾರನು. ಅನೇಕರು ಅತೃಪ್ತಿಯ ದೆಸೆಯಿಂದ ಯಾವಾಗಲೂ ಯೋಚನೆಯಲ್ಲಿಯೇ ಕಾಲವನ್ನು ಕಳೆಯುವರು. ಯೋಚಿಸಿ ಕಂಡುಹಿಡಿದ ವಿಷಯವನ್ನು ರೂಢಿಗೆ ತರುವುದಿಲ್ಲ. ಮುಂದೆ ದೇಶಭಕ್ತನಾಗಬೇಕೆಂತಲೂ, ಧರ್ಮಿಷ್ಟನಾಗಬೇಕೆಂತಲೂ, ಅಮಾತ್ಯನಾಗಬೇಕೆಂತಲೂ, ಕವಿಯಾಗಬೇಕೆಂತಲೂ, ವಾಗ್ಮಿ (Orator) ಯಾಗಬೇಕೆಂತಲೂ ಮನುಷ್ಯನು ಬಾಲ್ಯದಿಂದಲೇ ಕನಸಿನಲ್ಲಿಯೂ ಮನಸಿನಲ್ಲಿಯೂ ಕಳವಳಿಸುತ್ತಿರಬಹುದು. ಆದರೆ, ಅಂತಹ ತನ್ನ ಸಂಕಲ್ಪಸಾಧನೆಗಾಗಿ ಸರ್ವ ಪ್ರಯತ್ನವನ್ನೂ ಮಾಡದೆ ಹೋದರೆ, ಆತನ ಕನಸು "ತಿರುಕನ ಕನಸಿನಂತೆ" ನಷ್ಟವಾಗುವುದು.

ಸಹವಾಸದೋಷವು ಮನುಷ್ಯನ ಸಂಕಲ್ಪವನ್ನು ಬದಲಾಯಿಸುವುದು. ಚಟುವಟಿಕೆಯುಳ್ಳ ಜನರು ಅನೇಕವೇಳೆ ದುರಾತ್ಮರ ಸಹವಾಸಕ್ಕೆ ಸಿಕ್ಕಿ ಹಾಳಾಗುವರು. ಆದುದರಿಂದ ಮಹದಭಿಲಾಷೆಯುಳ್ಳ ಮಾನವನು ತನ್ನಂತೆಯೇ ಮಹತ್ಕಾರ್ಯಗಳಲ್ಲಿ ಕುತೂಹಲವುಳ್ಳವರ ಸಹವಾಸದಲ್ಲಿ ಸೇರಿದರೆ ಆಗ ಅವನ ಮನೋಗತವು ಈಡೇರುವುದು. ಆಗ ತನ್ನ ಮೆದುಳಿನಲ್ಲೊಂದು ಕಡೆ ನಿಂತು ಮಾಸಿಹೋಗುತ್ತಿದ್ದ ಆತ್ಮಬುದ್ಧಿಯು ಪ್ರಕಾಶಕ್ಕೆ ಬಂದು, ಆತನಿಗೂ ದೇಶಕ್ಕೂ ಮಹೋಪಕಾರವನ್ನು ಮಾಡಿ ಕೀರ್ತಿವಂತನಾಗುವ ಅಭಿಲಾಷೆಯು ಆತನಿಗುಂಟಾಗುವುದು.

---

## ಪ್ರಕರಣ ೧೧.

### ವಿವೇಕ—ಉಲ್ಲಾಸ.

ಹಿಂದಿನ ಪ್ರಕರಣದಲ್ಲಿ ಮಹದಪೇಕ್ಷೆಯು ಮನುಷ್ಯನಲ್ಲಿರಬೇಕೆಂದು ಹೇಳಿದುದಾಯಿತು. ಆದರೆ, ತಮ್ಮ ಅಪೇಕ್ಷೆಯನ್ನು ಈಡೇರಿಸುವುದರೊಳಗಾಗಿ ಅನೇಕರು ಬಾಯಿ ನಿಲ್ಲಲಾರದೆ ಊರಿನಲ್ಲೆಲ್ಲಾ ತಮ್ಮ ಅಭಿಲಾಷೆಯನ್ನು ಸಾರಿಬಿಡುವರು. ಇದರಿಂದ ಅವರು "ಬೊಗಳೆಯ ಕೆಂಚ" ನೆಂಬ ಬಿರುದನ್ನು ಪಡೆದು ಆತ್ಮಗೌರವವನ್ನು ಕಳೆದುಕೊಳ್ಳುತ್ತಾರೆ. ಆದುದರಿಂದ, ಜ್ಞಾನಿಯಾಗಲಿ, ಅಜ್ಞಾನಿಯಾಗಲಿ, ರಾಜನಾಗಲಿ, ಪ್ರಜೆಯಾಗಲಿ, ಮಂತ್ರಿಯಾಗಲಿ, ತಂತ್ರಿಯಾಗಲಿ, ಶಿಕ್ಷಕನಾಗಲಿ, ರಕ್ಷಕನಾಗಲಿ, ಬಲ್ಲಿದನಾಗಲಿ, ಬಡವನಾಗಲಿ, ಎಲ್ಲರೂ ವಿವೇಕವು ಕಳೆದ ಬಳಿಕ ಈ ಪ್ರಪಂಚದಲ್ಲಿ ತಲೆಯೆತ್ತಲಾ

ರರು. ಗಿಣಿಯ ಓದು ಓದಲ್ಲ ; ಕೋಣನಂತೆ ದುಡಿಯು ವುದು ಕೆಲಸವಲ್ಲ ; ನಿತ್ಯಪಯಣವು ಪಯಣವಲ್ಲ ; ದುಂದು ಗಾರಿಕೆಯು ದಾನವಲ್ಲ. ವಿವೇಕವಿಲ್ಲದಿದ್ದರೆ ಜನರಿಗೆ ಇವುಗ ಳಿಂದ ಆಯಾಸವೂ, ಅಪಕೀರ್ತಿಯೂ ಉಂಟಾಗುತ್ತದೆ. ವಿವೇಕವೆಂದರೆ ಸಮಯೋಚಿತವಾದ ತಿಳುವಳಿಕೆಯೆಂದು ಹೇಳ ಬಹುದು. "ಮಾತ ಬಲ್ಲವನು ಮಾಣಿಕ್ಯವನ್ನು ತರುವನು" ಎಂಬ ಗಾಥೆಯುಂಟು. ಇಲ್ಲಿ ಮಾತು ಎಂದರೆ ಹರಟೆಯಲ್ಲ. ತೆನಾಲಿ ರಾಮಕೃಷ್ಣನು ವಿವೇಕಶಾಲಿಗಳಲ್ಲಿ ಅಗ್ರಗಣ್ಯನೆಂದು ಆತನನ್ನು ಕುರಿತು ಬರೆದಿರುವ ಕಥೆಗಳಿಂದ ತಿಳಿಯಬರುತ್ತದೆ. ಒಂದು ದಿನ ಘನಪಂಡಿತನೊಬ್ಬನು ಒಂಟೆಯ ಮೇಲೆ ತನ್ನ ಪುಸ್ತಕಗಳನ್ನು ಹೇರಿಕೊಂಡು, ರಾಜಾಸ್ಥಾನಕ್ಕೆ ಬಂದು, ತಾನು ಯಾರೊಡನೆ ಬೇಕಾದರೂ ಚರ್ಚೆ ಮಾಡಬಲ್ಲೆನೆಂದು ಹೇಳಿಕೊಂಡನು. ರಾಮಕೃಷ್ಣನಿಗೆ ವಿಷಯವು ತಿಳಿಯಿತು. ಕೂಡಲೆ ಅವನು ಎಳ್ಳುಕಡ್ಡಿಗಳ ಒಂದು ಕಂತೆಗೆ ಎಮ್ಮೆ ಕಟ್ಟುವ ಹಗ್ಗವನ್ನು ಬಲವಾಗಿ ಬಿಗಿದು, ಅಜೇಯನಾದ ಆ ಪಂಡಿತನಿದಿ ರಿಗೆ ಮರುದಿನ ಬಂದು ನಿಂತನು. ಸಂಪ್ರದಾಯದಂತೆ ಪಂಡಿ ತರು ಪರಸ್ಪರ ಕುಶಲಪ್ರಶ್ನೆಗಳನ್ನು ಕೇಳುತ್ತಿರುವಾಗ ಒಂಟೆಯ ಪಂಡಿತನು ರಾಮಕೃಷ್ಣನ ಕಂಕುಳಲ್ಲಿದ್ದ ಹೊತ್ತಗೆಯೇನೆಂದು ವಿಚಾರಿಸಲು, ಆತನು ಬಹಳ ಗಂಭೀರಭಾವದಿಂದ ಅದು "ತಿಲಕಾಷ್ಠಮಹಿಷಬಂಧನ" ಎಂಬ ಪುಸ್ತಕವೆಂದು ಉತ್ತರ ವಿತ್ತನು. ಪಂಡಿತನು ಅದು ಯಾವುದೋ ಹೊಸ ಗ್ರಂಥ ವೆಂದೂ, ಅದೇ ತಿಳಿಯದಿರುವಾಗ ಇನ್ನು ಪ್ರಶ್ನೆಗಳಿಗೆ ಉತ್ತರ ಕೊಡಲಾಗುವುದಿಲ್ಲವೆಂದೂ ಹೆದರಿ, ಉಪಾಯದಿಂದ ಆಸ್ಥಾನ ವನ್ನು ಬಿಟ್ಟು ಹೊರಟುಹೋದನು.

ವಿವೇಕವೆಂಬುದರ ಗಂಧವೇ ಇಲ್ಲದಿರುವ ಅನೇಕ ಮಹನೀಯರು ಮಹಾಸಭೆಗಳನ್ನು ಹೊಕ್ಕು ಪೀಠವನ್ನಲಂಕರಿಸಿ ಬಾಯಬಿಟ್ಟು ಬಣ್ಣವಳಿದು ಹಿಂದಿರುಗುವರು. ಇವರೆಲ್ಲರೂ ತೆನಾಲಿ ರಾಮಕೃಷ್ಣನು ವಿವೇಕದಿಂದ ಹೇಗೆ ಪ್ರಕಾಶಕ್ಕೆ ಬಂದನೆಂಬುದನ್ನು ತಿಳಿಯಬೇಕು. ಅಥವಾ ಪುರಾತನ ಕವಿಯೊಬ್ಬನು ನುಡಿದಿರುವಂತೆ,

> ರಾಗರಸ ಮಿಗಲು ಸಭೆ ತಲೆ ।
> ದೂಗಲು ತಾ ನುಡಿಯ ಬಲ್ಲೊಡದ ನುಡಿ ಇನಿಸೊಂ ॥
> ದಾಗದಿರೆ ಸೈತು ಮೂಗೆಯು ।
> ಕೋಗಿಲೆಯಂತಿಹುದು ಸುಗುಣರತ್ನಕರಂಡಾ ॥

ಎಂದರೆ, ಚಮತ್ಕಾರದ ನುಡಿಗಳಿಂದ ಕೇಳುವವರು ಮೆಚ್ಚುವಂತೆ ಮಾತನಾಡಬೇಕು. ತಿಳಿಯದಿದ್ದರೆ ಗಂಭೀರವಾಗಿ ಕುಳಿತು ವಿವೇಕಿಗಳು ಆಡುವ ಸವಿನುಡಿಗಳನ್ನು ಲಾಲಿಸಿ ತಾನೂ ಕಾಲಕ್ರಮದಲ್ಲಿ ವಿವೇಕವನ್ನು ಹೊಂದಬೇಕು. ನಾಟಕದಲ್ಲಿ ವೇಷಧಾರಿಯಾದ ಪುರುಷನು ಇತರರೊಡನೆ ಎಲ್ಲಿ ಮಾತನಾಡಬೇಕಾದರೂ ಅದೇ ನಟನೆಯೇ ; ಆ ಹಾವಭಾವಗಳೇ ಎಲ್ಲೆಲ್ಲಿಯೂ ಹೊರಪಡುವವು. ಇದರಂತೆ ವಿವೇಕಿಗಳ ಸಹವಾಸದಿಂದ ಜನರಿಗೆ ವಿವೇಕವುಂಟಾಗಬಹುದು. ಆದರೆ, ಅದು ಸ್ವಾಭಾವಿಕವಾದ ವಿವೇಕಕ್ಕೆ ಸಮಾನವಾಗಲಾರದು. ವಿವೇಕವು ಮಾತಿನಲ್ಲಿಯೂ ಕಾರ್ಯದಲ್ಲಿಯೂ ಹೊರಪಡುತ್ತದೆ. ಆದುದರಿಂದ ಅದನ್ನು ಚಮತ್ಕಾರವೆಂತಲೂ, ಜಾಣ್ಣುಡಿಯೆಂತಲೂ ಕರೆಯುವುದುಂಟು.

ಹನ್ನೊಂದನೆಯ ಲೂಯಿ ಎಂಬುವನು ಫ್ರಾನ್ಸ್ ದೇಶದ ದೊರೆಯಾಗಿದ್ದಾಗ, ಒಬ್ಬ ಜ್ಯೋತಿಷ್ಕನು ಜನರಿಗೆ ಭವಿಷ್ಯದ್ವ

ರ್ತಮಾನಗಳನ್ನು ಹೇಳುವನೆಂದು ಕೇಳಿ, ದೊರೆಗೆ ಬಹಳ ಕೋಪಬಂದಿತು. ಲೂಯಿಯು ಆತನನ್ನು ಉಪಾಯದಿಂದ ಅರಮನೆಗೆ ಕರೆಯಿಸಿ, ಜ್ಯೋತಿಷ್ಕನನ್ನು ಕುರಿತು, "ಶಾಸ್ತ್ರಿಯೇ, ಇತರರ ಮರಣವನ್ನು ತಿಳಿಸುವ ನೀನು ನಿನ್ನ ಮರಣವನ್ನು ಬೇಗನೆ ಹೇಳು ; ಇಲ್ಲದಿದ್ದರೆ ನಿನಗೆ ಶಿಕ್ಷೆಯಾದೀತು" ಎಂದು ಗದರಲು, ಶಾಸ್ತ್ರಿಯು ವಿವೇಕಮತಿಯಾದುದರಿಂದ ಹೆದರದೆ, "ರಾಜಾಧೀಶನೆ, ನನ್ನ ಮರಣವು ನಿನ್ನ ಮರಣಕ್ಕಿಂತ ಮೂರು ದಿನ ಮುಂಚಿತವಾಗಿ ಆಗುತ್ತದೆ" ಎಂದು ತಿಳಿಸಿದನು. ರಾಜನು ಜೋಯಿಸನ ಮರಣದಿಂದ ತನಗೆ ಮರಣವಾಗುವುದೆಂದು ಹೆದರಿ ಆತನನ್ನು ಮನ್ನಿಸಿ ಕಳುಹಿಸಬೇಕಾಯಿತು.

ಹಿಂದೂ ದೇಶದ ಚಕ್ರವರ್ತಿಯವರಾಗಿದ್ದ ಏಳನೆಯ ಎಡ್ವರ್ಡರವರು ವಿವೇಕಶಿಖಾಮಣಿಯೆಂದು ಹೆಸರುಗೊಂಡಿರುತ್ತಾರೆ. ಅವರು ಒಮ್ಮೆ ಇಟಲಿಗೆ ಬಿಜಯಮಾಡಿಸಿದ್ದಾಗ, ದೇಶಮುಖ್ಯರು ಇವರನ್ನು ಇದಿರುಗೊಂಡು, ಮಳೆಗಾಲವಾದುದರಿಂದ ಅವರು ನಡೆಯಬೇಕಾಗಿದ್ದ ದಾರಿಯುದ್ದಕ್ಕೂ ಬಟ್ಟೆಯನ್ನು ಹಾಸಿದ್ದರು. ಕೊನೆಯ ವರೆಗೂ ನಡೆದು ಬಂದ ಮೇಲೆ, ಕೆಲವು ಗಜಗಳ ಮುಟ್ಟಿಗೆ ಬಟ್ಟೆಯು ಸಾಲದೆ ಹೋಯಿತು. ಜನರು ಆತುರದಲ್ಲಿ ತಮ್ಮ ದೇಶೀಯ ಧ್ವಜವನ್ನು ಹಾಸಿದರು. ಅದನ್ನು ಕಂಡು ಎಡ್ವರ್ಡರವರು ತಕ್ಷಣ ಟೋಪಿಯನ್ನು ಮರ್ಯಾದೆಯಿಂದ ಮೇಲಕ್ಕೆತ್ತಿ, ಧ್ವಜವನ್ನು ಬಿಟ್ಟು ಪಕ್ಕಕ್ಕೆ ಸರಿದು, ತೇವದ ನೆಲದಲ್ಲಿಯೇ ನಡೆದುಬಂದು ಬಂಡಿಯನ್ನು ಸೇರಿದರು.

ವಿವೇಕವು, ಆತುರ, ಕೋಪ ಎಂಬೀ ಶತ್ರುಗಳ ವಶಕ್ಕೆ ಸಿಕ್ಕಿದರೆ ಬದುಕಲಾರದು. ಆತುರಪಟ್ಟರೆ ಮಾಡಬೇಕಾದ

ಕೆಲಸವು ಮರೆತುಹೋಗುವುದು. ಕೋಪಕ್ಕೊಳಗಾದರೆ ಮುಂದಾಲೋಚನೆಯು ಅಳಿಸುವುದು. ಕೋಪದಿಂದ ಅರ್ಥ ಹಾನಿಯೂ, ಕಾರ್ಯಹಾನಿಯೂ, ಮಾನಹಾನಿಯೂ ಉಂಟಾಗುತ್ತಿರುವಾಗ ವಿವೇಕಕ್ಕೆ ನಿಲುಗಡೆಯುಂಟೇ ? ಆದುದರಿಂದ ಲಕ್ಷ್ಮೀಶ ಕವಿಯು ಜೈಮಿನಿ ಭಾರತದಲ್ಲೊಂದು ಕಡೆ,

"ಬಹಳ ಕೋಪಾತಿಶಯದೊಳಿಹ ವಿವೇಕ"

ಎಂಬುದಾಗಿ ನುಡಿದಿರುವನು. ವಿವೇಕವು ಕೋಪದ ಇದಿರಿಗೆ ನಿಲ್ಲಲಾರದು. ಆಗ, ಮನುಷ್ಯನು ಜ್ಞಾನಶೂನ್ಯನಂತೆ ಅನರ್ಥಗಳನ್ನುಂಟುಮಾಡಿಕೊಂಡು ನರಳುವನು. ಕೋಪದಲ್ಲಿ ಕುಯ್ದು ಮೂಗು ಶಾಂತಿಯಲ್ಲಿ ಹತ್ತಲಾರದು. ಆದಕಾರಣ ಎಲ್ಲರೂ ಶಾಂತಮನಸ್ಕರಾಗಿ ಸಾಧ್ಯವಾದ ಮಟ್ಟಿಗೆ ಉಲ್ಲಾಸದಿಂದ ಕೂಡಿರುವುದರಿಂದ ಸುಖವುಂಟು.

"ಮನಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ"

ಎಂದು ಹೇಳಿರುವುದರಿಂದ ಮನುಷ್ಯನ ಮೇಲು ಕೀಳುಗಳಿಗೆ ಆತನೇ ಕಾರಣನು. ಪರರ ಸಿರಿಯನ್ನು ನೋಡಿ ಕರುಬುವನಿಗೆ ಉಲ್ಲಾಸವಿಲ್ಲ ; ಸ್ತ್ರೀ ವ್ಯಾಮೋಹಕ್ಕೆ ಸಿಕ್ಕಿದವನಿಗೆ ಉಲ್ಲಾಸವಿಲ್ಲ ; ಕಳ್ಳನಿಗೆ ಉಲ್ಲಾಸವಿಲ್ಲ ; ಸುಳ್ಳನಿಗೆ ಉಲ್ಲಾಸವಿಲ್ಲ. ಒಟ್ಟನಲ್ಲಿ ದುರುಳರಿಗೆ ಉಲ್ಲಾಸದ ಫಲವು ದೊರೆಯುವುದಿಲ್ಲ. ಉಲ್ಲಾಸದ ಫಲವು ಮನೋರೋಗದ ಫಲಕ್ಕಿಂತಲೂ ಉತ್ಕೃಷ್ಟವಾದುದು. ದುರಾಲೋಚನೆ, ಚಿಂತೆ ಇವುಗಳೇ ಮನೋರೋಗಗಳು ; ಮೊದಲು ದುರಾಲೋಚನೆಯೂ ಅದರಿಂದ ಚಿಂತೆಯೂ ಮನಸ್ಸನ್ನು ಕೆಡಿಸುವವು. ನೆರೆಹೊರೆಯವರನ್ನೂ ನಂಟರನ್ನೂ ಹಾಳುಮಾಡಿ, ಅಷ್ಟೈಶ್ವರ್ಯ

ಗಳನ್ನು ಗೆಳಿಸಿದರೂ ಕಡೆಗೆ ಜನರು ಚಿಂತೆಯೆಂಬ ಬೆಂಕಿಯಲ್ಲಿ ಬಿದ್ದು ಜೀವಸಹಿತ ಬೇಯಬೇಕಾಗುವುದು.

ಸಂತೋಷವುಳ್ಳವನು ಹಿಂದಣ ಕಷ್ಟಗಳನ್ನು ಮರೆಯು ವನು. ಆತನಿಗೆ ಜನರ ತಪ್ಪುನೆಪ್ಪುಗಳನ್ನು ಹುಡುಕಬೇಕೆಂಬ ಇಚ್ಛೆ ಇರದು. ಕರ್ತವ್ಯಪರಾಯಣನಾಗಿ, ನಗೆಮೊಗದ ದರ್ಶನ ದಿಂದ ಇತರರನ್ನು ಉಲ್ಲಾಸಗೊಳಿಸುವವನಾಗಿ, ಹೀನಸ್ಥಿತಿ ಗಾಗಿ ಮರುಗದೆ ಯಾವಾಗಲೂ ಅಭಿವೃದ್ಧಿ ಮಾರ್ಗದಲ್ಲಿ ನಡೆ ಯುವ ಮಾನವನು ಯೌವನದ ಸಾಮರ್ಥ್ಯವನ್ನೂ, ಎಳಗೂ ಸಿನ ಆನಂದವನ್ನೂ ಅನುಭವಿಸುವನು. ಸಂತೋಷದಿಂದ ಮಾಡಿದ ಕೆಲಸವು ಮನುಷ್ಯನಿಗೆ ಆಯಾಸವನ್ನುಂಟುಮಾಡುವು ದಿಲ್ಲ. ಫೆರೋಜ್‌ಷಹ ಮೆಹಟ, ದಾದಾಬಾಯಿ ನವರೋಜಿ, ಏಬ್ರಾಮ್ ಲಿಂಕರ್ನ, ಮಹಾತ್ಮಾ ಗಾಂಧಿ ಇವರುಗಳಿಗೆ ಸಂತೋಷವೇ ಸರ್ವಸಾಧನ.

ವಿವೇಕದ ದಾರಿಯನ್ನು ಪ್ರವೇಶಿಸಬೇಕೆಂದು ನಾವು ದೃಢಮನಸ್ಸಿನಿಂದ ಸಾಧಿಸುವಾಗ ಪರಿಣಾಮಫಲಗಳನ್ನು ಯೋ ಚಿಸಬೇಕು. ಇಲ್ಲವಾದರೆ ಪ್ರಮಾದದಿಂದ ಉತ್ಪನ್ನವಾಗುವ ತಪ್ಪಿತಕ್ಕೆ ಬದ್ಧರಾಗಬೇಕಾಗುವುದು. ಮೂಢತ್ವದ ದಾರಿಯು ಘೋರವಾದ ಕಷ್ಟನಷ್ಟಗಳನ್ನುಂಟುಮಾಡುತ್ತದೆ. ವಿವೇಕ ದೊಡನೆ ಉಲ್ಲಾಸವು ಸೇರಿದರೆ ಜನಾಂಗವು ಏಳಿಗೆಗೆ ಬರುವು ದೆಂದು ಮಹನೀಯರು ಹೇಳುವರು.

ಮುಂದಣ ಕಷ್ಟಗಳನ್ನು ನೆನೆದು ಇಂದೇ ನರಳುವುದು ಕೆಲವರ ಅಭ್ಯಾಸವಾಗಿದೆ. ಇವರ ಚಿಂತೆಯು ಇವರ ಆಯುರಾ ರೋಗ್ಯಗಳನ್ನು ಹಾಳುಮಾಡುತ್ತದೆ. ಸಂತೋಷವೆಂದರೆ

ಆರ್ಭಟಿಸಿ ನಗುವುದಲ್ಲ. ಮಾತುಮಾತಿಗೂ ಹಲ್ಲ ಬಿಡುವುದಲ್ಲ. ಕಷ್ಟಬಂದಾಗಲೂ, ಸುಖವುಂಟಾದಾಗಲೂ, ಏಕಭಾವದಿಂದ ಸದಾನಂದ ಮೂರ್ತಿಯಂತೆ ಮನಸ್ಸು, ವಾಕ್ಕು, ಶರೀರ ಇತ್ಯಾದಿಗಳ ಮೂಲಕ ಉಲ್ಲಾಸವನ್ನು ಬೀರುತ್ತಿರಬೇಕು. ಲೊವ್‌ಲೇಸ್ ಎಂಬ ಆಂಗ್ಲೇಯ ಕವಿಯು ಹೀಗೆ ಹೇಳಿರುವನು.—

"Stone walls do not a prison make,
Nor iron bars a cage ;
Minds innocent and quiet take,
That for an hermitage"

ಕಾರಾಗೃಹವಾಗಲಿ, ಕಬ್ಬಿಣದ ಪಂಜರವಾಗಲಿ, ನಿರ್ಮಲಚಿತ್ತನಾದವನಿಗೆ ದೇವಸನ್ನಿಧಿಯಂತೆ ಆನಂದದಾಯಕವಾಗಿರುವವು. ಹರಿಶ್ಚಂದ್ರನು ಕೇವಲ ಸಂತೋಷದಿಂದಲೇ ಸ್ಮಶಾನವನ್ನು ಕಾದನು. ನಳರಾಜನು ಮನಸ್ಸಂತೋಷದಿಂದಲೇ ಋತುಪರ್ಣನ ಸಾರಥಿಯಾದನು. ಶ್ರೀ ಕೃಷ್ಣನು ಪಾಂಡವರಿಗಾಗಿ ದುಡಿದುದು ಸಂತೋಷದಿಂದಲೇ ; ದುಷ್ಟಬುದ್ಧಿಗೆ ದುಃಖ ; ಪಾಪಿಗೆ ಶೋಕ. ಪ್ರಪಂಚದ ಸೃಷ್ಟಿಯೆಲ್ಲವೂ ಒಂದೇ ಎಂದು ಭಾವಿಸಿ, ಎಲ್ಲವನ್ನೂ ಸಮದೃಷ್ಟಿಯಿಂದ ಕಾಣುತ್ತಿರುವ ನಿತ್ಯನಿರ್ಮಲಚಿತ್ತನಿಗೆ ಭೂಲೋಕವೇ ಸ್ವರ್ಗಲೋಕವು. ಆತನು ಇಹದಲ್ಲಿ ಸುಖವನ್ನೂ ಪರದಲ್ಲಿ ಮೋಕ್ಷವನ್ನೂ ಅನುಭವಿಸಿ ಅನಂತವಿಖ್ಯಾತನಾಗುವನು.

---

# ಪ್ರಕರಣ ೧೨.

## ಸೈರಣೆ—ಸತ್ಕಾರ.

**ಅರಿಗಳನೆರಗಿಪುದೆ ಪದಾ | ಭರಣಂ ನೀತಿಗಳನರಿದುಕೊಳ್ವುದೆ ಕರ್ಣಾ |**
**ಭರಣಂ ಕೊಡುವುದೆ ಹಸ್ತಾ | ಭರಣಂ ಸೈರಣೆಯುದಿರಲು ಸರ್ವಾಭರಣಂ ||**

ಹಿಂದಣ ಪ್ರಕರಣದಲ್ಲಿ ಕೋಪದಿಂದುಂಟಾಗುವ ಅನರ್ಥಗಳನ್ನು ವಿವರಿಸಿದುದಾಯಿತು. ಕೋಪಿಯಾದವನು ಸಮುದ್ರದ ಮಧ್ಯದಲ್ಲಿ ಬಿರುಗಾಳಿಗೆ ಸಿಕ್ಕಿದ ಹಡಗಿನಂತೆ ದಿಕ್ಕುತಪ್ಪಿ ಹಾಳಾಗುವನು. ಶತೃಸೈನಿಕರನ್ನು ನಿಗ್ರಹಿಸುವುದೇ ಸೈನ್ಯದ ಲಕ್ಷಣ ; ದಾನ ಧರ್ಮಗಳನ್ನು ಮಾಡುವುದೇ ಹಸ್ತಲಕ್ಷಣ ; ಸೈರಣೆಯೊಂದಿದ್ದರೆ ಮನುಷ್ಯನು ಸರ್ವಲಕ್ಷಣಸಂಪನ್ನನೆನಿಸುವನು. ಕೋಪವು ಕೊನೆಗೆ ತಾಪವನ್ನುಂಟುಮಾಡುತ್ತದೆ. ಸೈರಣೆ ಅಥವಾ ತಾಳ್ಮೆ ಅಥವಾ ಸಹನೆಯು ಕೋಪವೆಂಬ ಘೋರಶತೃವನ್ನು ಜಯಿಸಬಲ್ಲುದು.

ಆದರೆ ತಾಳ್ಮೆಯನ್ನು ಪರಿಗ್ರಹಿಸುವವನು ಮೊತ್ತಮೊದಲು ನಾಲಗೆಯನ್ನು ವಶದಲ್ಲಿಡಬೇಕು. ಕೆಲವರಿಗೆ ನೆರೆಮನೆಯ ಸುದ್ದಿಯನ್ನು ಎತ್ತಿ ಮಾತನಾಡದಿದ್ದರೆ ಊಟವು ಅರಗುವುದಿಲ್ಲ. ಪರನಿಂದೆಯು ಅವರಿಗೆ ಪರಮವಿನೋದವನ್ನುಂಟುಮಾಡುತ್ತದೆ. ಬಾಯಿಯು ಕೊಬ್ಬಿ ಬಯ್ಯುವ ಮನುಷ್ಯನಿಗೆ ಗಾಯವಾಗದಿರದು.

“ಸುಮ್ಮನಿರು ಕಂಡ್ಯ ನಾಲಗೆ ಒಬ್ಬ | ರಾಡಿಕೊಳ್ಳಲಿ ಬ್ಯಾಡ ನಾಲಗೆ” ಎಂಬುದಾಗಿ ಜ್ಞಾನಮಾರ್ಗ ತತ್ವವು ನುಡಿಯುತ್ತದೆ. ಆದರೆ ಪಾಪಮಾರ್ಗವನ್ನು ಜಪಿಸುವ ಕೋಪಿಗಳಿಗೆ ಜ್ಞಾನಮಾರ್ಗತತ್ವವು ಸೊಗಯಿಸಲಾರದು. ಇತರರು

ತನ್ನನ್ನು ಸಹಿಸಲಸಾಧ್ಯವಾದ ಅಪವಾದಕ್ಕೂ ಸಂಕಟಕ್ಕೂ ಗುರಿಮಾಡಿದಾಗೆ ಸುಜ್ಞಾನಿಯು ಮಾತ್ರ ಸ್ಥೈರಣೆಯ ಬಲದಿಂದ ಎಲ್ಲವನ್ನೂ ತಾಳಿ ನಿಲ್ಲಬಲ್ಲನು. ನಾಯಿಯು ಬಗುಳುತ್ತದೆಂದು ಪಟ್ಟದಾನೆಯು ಕೂಗೀತೇ? ದುಷ್ಟರು ಅನೇಕ ವೇಳೆ ಸಜ್ಜನರ ಮಹತ್ವವನ್ನು ಪರೀಕ್ಷಿಸಬೇಕೆಂದು ಅವರನ್ನು ಸಂಕಟಪಡಿಸುವುದುಂಟು.

**ಸಲ್ಲದ ಬವರವುಮಂ ತನ ।**
**ಗಲ್ಲದ ನಂಟರುಮನಿಚ್ಛೆಯರಿಯದ ಸತಿಯಂ ॥**
**ಹೊಲ್ಲೆಹವ ನುಡಿವ ಮನುಜನ ।**
**ಮೆಲ್ಲನೆ ಬಿಡುವುದು ವಿವೇಕಚೂಡಾರತ್ನಾ ॥**

ಎಂಬುದಾಗಿ ಓರ್ವ ಕವಿಸಾರ್ವಭೌಮನು ಹೇಳಿರುವನು. ದುಷ್ಟರು ಕೆಣಕಿದಾಗೆ ಉಪಾಯದಿಂದ ತಪ್ಪಿಸಿಕೊಳ್ಳಬೇಕು. ಸೆಗೆಣಿ ಎತ್ತುವನಲ್ಲಿ ಜಗಳವಾಡುತ್ತ ನಿಂತರೆ ಸೆಗಣಿಯ ಪೆಟ್ಟು ಬಲವಾಗಿ ಬೀಳುವುದು. ಅಸೂಯಾಪರರಾದ ಬಂಧುಗೆಳ ಸಂಪರ್ಕವು ಕೇಡನ್ನುಂಟುಮಾಡುತ್ತದೆ. ಜಗಳಗಂಟಿಯಾದ ಹೆಂಡತಿಯ ಒಡನಾಟವು ಹಾನಿಕರವಾದುದು. ಮೇಲೆ ಹೇಳಿದ ಮೂರು ಜಾತಿಯ ಮಾನವರಲ್ಲಿ ಹೊಡೆದಾಟಕ್ಕೆ ನಿಲ್ಲದೆ ಸ್ಥೈರಣೆಯಿಂದಲೂ ಉಪಾಯದಿಂದಲೂ ವಿವೇಕಿಯಾದವನು ದೂರವಾಗುವನು. ಮುಯ್ಯಿಗೆ ಮುಯ್ಯಿ ಕೊಡಬೇಕಾದುದು ಸದ್ಧರ್ಮವೇ ಅಹುದು. ಆದರೆ ಈ ಸಂದರ್ಭದಲ್ಲಿ ಹಾಗೆ ನಡೆದರೆ, ಅದು ಸಾಮಾನ್ಯ ಜನರ ಧರ್ಮವೇ ಹೊರತು ಜ್ಞಾನಿಗಳ ಧರ್ಮವಲ್ಲ. ಶ್ರೀಕೃಷ್ಣ, ಅರ್ಜುನ, ಯೇಸುಕ್ರಿಸ್ತ, ಜುಡಾಸ್, ಸೊಕ್ರಟಿಸ್, ಸಾಂಟಿಪ್ ಇವರಲ್ಲಿ ಎರಡು, ನಾಲ್ಕು ಮತ್ತು ಆರನೆಯವರು ಕೇವಲ ಸಾಮಾನ್ಯ ಜನರು ; ಮಿಕ್ಕವರು ಅವತಾರ ಪುರುಷರು. ರಾಜ್ಯವನ್ನು ಹಂಚುವಾಗೆ

ದುರ್ಯೋಧನನಾಡಿದ ಮಾತಿಗೆ ರೇಗಿದ ಅರ್ಜುನನನ್ನು ಶ್ರೀ ಕೃಷ್ಣನು ಸಮಾಧಾನಪಡಿಸಿದನು. ಯೇಸುಕ್ರಿಸ್ತನು ತನ್ನ ಮೇಲೆ ದೋಷಾರೋಪಣೆಯನ್ನು ಮಾಡಿದ ಜುಡಾಸನನ್ನು ಮನ್ನಿಸಿದನು. ಸಾಂಟಿಪ್ ಎಂಬುವಳು ರೋಮನರ ಮತೋದ್ಧಾರಕರಲ್ಲಿ ಅಗ್ರಗಣ್ಯನೂ, ತನ್ನ ಪತಿಯೂ ಆದ ಸೊಕ್ರೆಟಿಸನನ್ನು ಬಹಳ ಪೇಚಾಡಿಸುತ್ತಿದ್ದಳು. ಒಂದು ದಿನ ಆ ಗಂಡುಬೀರಿಯು ರಾಜಬೀದಿಯಲ್ಲಿ ಬರುತ್ತಿದ್ದ ತನ್ನ ಪತಿಯನ್ನು ಅಡ್ಡಗಟ್ಟಿ ಆತನ ಮೇಲೆ ಕಲಗಚ್ಚಿನ ನೀರನ್ನು ಸುರಿದಳಂತೆ! ಮಹಾತ್ಮನಾದ ಸೊಕ್ರೆಟಿಸನು ಆ ಮಾನಹೀನಳ ಸಲ್ಲದ ಕೆಲಸಕ್ಕೆ ಮನಗೊಡದೆ ಅವಳನ್ನು ಕುರಿತು, "ಎಲೈ ನಾರಿಯೇ, ಮುಂಗಾರು ಗುಡುಗಿನೊಡನೆ ಮಳೆಯು ಸುರಿವುದು ಹೀಗೆಯೇ ಅಲ್ಲವೇ ?" ಎಂದನಂತೆ. ಹೀಗೆ ಅನೇಕವೇಳೆ ಆಕೆಯ ಅವಾಂತರವನ್ನು ಕಂಡ ಸ್ನೇಹಿತರು ಅವಳನ್ನು ಮನೆಯಿಂದೋಡಿಸುವಂತೆ ಸೊಕ್ರೆಟಿಸನಿಗೆ ತಿಳಿಸಲು ಆತನು ಸ್ನೇಹಿತರೊಡನೆ ಸರಸಭಾವದಿಂದ "ಕುದುರೆಯ ಸವಾರಿಯನ್ನು ಕಲಿಯತಕ್ಕವನು ತುಂಟ ಕುದುರೆಯನ್ನು ಹತ್ತಿದರೆ ಬೇಗನೆ ಒಳ್ಳೆಯ ಸವಾರನಾಗುವನು. ಅದರಂತೆ ನನ್ನಂತಹ ತತ್ವಜ್ಞಾನಿಗೆ ಇವಳಂತಹ ಹಟಮಾರಿಯೇ ಸರಿ" ಎಂದು ಹೇಳುತ್ತಿದ್ದನಂತೆ. ಸಾಮಾನ್ಯರಿಗೆ ಈತನ ಸೈರಣೆಯೂ, ಈತನ ಮನ್ನಣೆಯೂ ಎಂದಿಗೂ ಬರಲಾರವು. ಸಾಂಟಿಪಳು ಗಂಡನ ಸೈರಣೆಗೆ ಬೆರಗಾಗಿ ಕಡೆಗೆ ಅವನ ಪರಮ ಭಕ್ತಳಾದಳು. ಇದರಿಂದಲೇ ಬೈಬಲಿನಲ್ಲೊಂದುಕಡೆ,

A soft answer turneth away wrath
but grievous words stir up anger.

ಎಂದು ಹೇಳಿದೆ. ಮಾತೇ ಪರಮೌಷಧ ; ಮಾತೇ ಶತೃಮಿತ್ರತ್ವಕ್ಕೆ ಕಾರಣ ; ಮಾತೇ ಸರ್ವಸುಖಸಾಧನ. ಆದುದರಿಂದ ದುಷ್ಟರನ್ನು ಮುದ್ದು ಮಾತುಗಳಿಂದ ಮೋಹಗೊಳಿಸಿ ಗೆಲ್ಲುವವನೇ ಧೀರನು. ಉಪಾಯದಿಂದಲೂ, ಸೈರಣೆಯಿಂದಲೂ ತಪ್ಪಿಸಿಕೊಳ್ಳದೆ ತಾನೂ ಪ್ರತಿಭಟಿಸಿದರೆ ಅದರಿಂದ ಮಾನಹಾನಿಯು ತಪ್ಪದೆ ಉಂಟಾಗುವುದು.

ಉಗುರಲ್ಲಿ ಹೋಗುವುದಕ್ಕೆ ಕೊಡಲಿಯನ್ನೆತ್ತುವುದು ಹುಚ್ಚುತನ. ಅನೇಕವೇಳೆ ಬಂಧು ಮಿತ್ರರ ತಪ್ಪುಗಳನ್ನೆಣಿಸಿ ಜನರು ವೈರವನ್ನು ತಂದುಕೊಳ್ಳುವರು. ಅನೇಕ ಸಂಘಗಳೂ, ಸಮಾಜಗಳೂ ಹೀಗೆಯೇ ಹಾಳಾಗಿವೆ. ಸೈರಣೆಯೊಂದಿದ್ದರೆ ಎಂದಿಗೂ ಹೀಗಾಗುತ್ತಿರಲಿಲ್ಲ. "ಕಾರ್ಲೈಲ್" ಎಂಬ ಗ್ರಂಥಕರ್ತನು ಮೂರು ವರ್ಷಗಳ ಕಾಲ ಕಷ್ಟಪಟ್ಟು ಬರೆದ ಗ್ರಂಥವನ್ನು "ಜಾರ್ಜ ಸ್ಟೂಯರ್ಟ್ ಮಿಲ್" ಎಂಬ ಸ್ನೇಹಿತನು ತೆಗೆದುಕೊಂಡು ಹೋಗಿ, ಕಾರಣಾಂತರದಿಂದ ಗ್ರಂಥವು ಸುಟ್ಟು ಹೋಗಲು, ನಯದಿಂದಲೂ ಭಯದಿಂದಲೂ ಗ್ರಂಥಕರ್ತನಿಗೆ ನಡೆದ ಸಮಾಚಾರವನ್ನು ತಿಳಿಯಪಡಿಸಿದನು. ದಯಾಳುವಾದ "ಕಾರ್ಲೈಲು" ಸ್ನೇಹಿತನನ್ನು ಮನ್ನಿಸಿ ಕಳುಹಿಸಿ ತನ್ನ ಹೆಂಡತಿಯೊಡನೆ, "ಪ್ರಿಯೆ, ಗ್ರಂಥವು ಹೋದುದರಿಂದ ನಮಗೆಷ್ಟೋ ನಷ್ಟವುಂಟಾಗಿದೆ. ಆದರೆ ಅದನ್ನು ಸ್ನೇಹಿತನಿಗೆ ತಿಳಿಸಿ ಸಂಕಟಪಡಿಸುವುದು ಒಳ್ಳೆಯದಲ್ಲ" ವೆಂದು ಹೇಳಿದನು.

"ಸರ್ ಐಸೆಕ್ ನ್ಯೂಟನ್" ಎಂಬ ಭೌತಿಕ ಶಾಸ್ತ್ರಜ್ಞನು ಹತ್ತು ವರ್ಷಗಳ ಕಾಲ ಬರೆದಿಟ್ಟ ಗ್ರಂಥವನ್ನು "ಡೈಮಂಡ್" ಎಂಬ ಆತನ ನಾಯಿಯು, ಆತನಿಲ್ಲದ ವೇಳೆಯಲ್ಲಿ ಹತ್ತಿರದಲ್ಲಿದ್ದ ದೀಪದ ಉರಿಗೆ ತಿಳಿಯದೆ ಮುಟ್ಟಿಸಿಬಿಟ್ಟಿತು. ನ್ಯೂ

ರ್ಟನನು ಬರುವುದರೊಳಗಾಗಿ ತನ್ನ ಗ್ರಂಥವು ಭಸ್ಮವಾಗಿದ್ದು ದನ್ನು ಕಂಡು, ತನಗುಂಟಾದ ಸಂಕಟವನ್ನು ನುಂಗಿ, ನಾಯನ್ನು ನೋಡಿ, "ಎಲೈ ನಾಯೇ, ನನಗುಂಟಾಗಿರುವ ನಷ್ಟವನ್ನು ನೀನು ಬಲ್ಲೆಯಾ !" ಎಂದು ಹೇಳಿ ಸುಮ್ಮನಾದನು.

ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಗಳೆಂಬ ಅರಿಷಡ್ವರ್ಗಗಳನ್ನು ಗೆದ್ದ ಮೇಲೆ ಸೈರಣೆಯು ತಾನಾಗಿಯೇ ಉಂಟಾಗುವುದು. ಈ ಆರು ಕುದುರೆಗಳನ್ನು ಬಿಗಿ ಹಿಡಿದು ನಡೆಸಿದರೆ, ಚಿತ್ತಶಾಂತಿಯುಂಟಾಗಿ ತಾಳ್ಮೆಯುಂಟಾಗುವುದು. ಅಲೆಕ್ಸಾಂಡರನು ರಣಧೀರನೇ ಸರಿ ; ಆದರೆ ಅರಿಷಡ್ವರ್ಗಗಳನ್ನು ಗೆಲ್ಲಲಾರದೆ ಹೋದನು. ಆತನು ಕೋಪದಲ್ಲಿ ಸ್ನೇಹಿತನನ್ನು ಕೊಂದನು. ಕುಡುಕತನವನ್ನು ಬಿಡಲಾರದೆ ಹೋದನು. ಕಾಮನ ಶರಹತಿಗೆ ತುತ್ತಾದನು. ಹೀಗೆ ಆತನು ಅಕಾಲಮೃತ್ಯುವಿಗೆ ಗುರಿಯಾಗಬೇಕಾಯಿತು. ಆದುದರಿಂದ ಮಾನವನ ನಡತೆಯು ಸೈರಣೆ ಇಲ್ಲದಿದ್ದರೆ, ಅನೇಕ ಕಷ್ಟನಷ್ಟಗಳನ್ನು ತಂದೊಡ್ಡುತ್ತದೆ.

ಸೈರಣೆಯಂತೆಯೇ ಸತ್ಕಾರವೂ ಇರಬೇಕು. ಮನೆಗೆ ಬಂದವರಿಗೆ ಊಟವಿಕ್ಕುವುದು ಹೇಗೆ ಮುಖ್ಯವೋ ಹಾಗೆ ಅವರೊಡನೆ ಮರ್ಯಾದೆಯ ಮಾತುಗಳನ್ನಾಡಿ ಸಂತೋಷಪಡಿಸಬೇಕಾದುದೂ ಮುಖ್ಯವೆಂದು ತಿಳಿಯಬೇಕು. ಮುಸುಡನ್ನು ಓರೆಮಾಡಿಕೊಂಡು ಒಂದು ತುತ್ತು ಕೂಳನ್ನು ಹಾಕಿ, "ಕಂಕುಳಲ್ಲಿ ದೊಣ್ಣೆ, ಕೈಯ್ಯಲ್ಲಿ ಶರಣಾರ್ತಿ" ಯ ಶಾಸ್ತ್ರವನ್ನು ಮಾಡಿ ಸಾಗಹಾಕುವುದು ಸತ್ಕಾರವಲ್ಲ. ಬರಿಯ ಅಕ್ಕರದ ನುಡಿಗಳು ಸನ್ಮಾನವಲ್ಲ ; ದಾಕ್ಷಿಣ್ಯದೂಟವು ಸತ್ಕಾರವಲ್ಲ : ಆದರಪೂರ್ವಕವಾದ ಮಾತು ಆದಿನಾರಾಯಣನ ಕೃಪೆಗೆ ಸಮಾ

ನವಾದುದು. ಮನಃಪೂರ್ವಕವಾಗಿ ಕೊಟ್ಟ ಊಟವು ಮೂ ಲೋಕದಾನಕ್ಕೆ ಸಮಾನವಾದುದು.

ಶ್ಲೋ ॥ ಮುಖಂ ಪ್ರಸನ್ನಂ ವಿಮಲಾ ಚ ದೃಷ್ಟಿಸ್ತಥಾನುರಾಗೋಮಧುರಾಚ ವಾಣೀ । ಸ್ನೇಹೋಧಿಕಸ್ಸಂಭ್ರಮದರ್ಶನಂ ಚ ಸದಾನುರಕ್ತಸ್ಯ ನರಸ್ಯ ಲಕ್ಷಣಂ ॥

ಶ್ಲೋ ॥ ಮಧುರಂ ಮಧು ಮೃದ್ವೀಕಾ ಮಧುರಾಚ ತಯೋಸ್ಸಿತಾ । ತಾಭ್ಯಶ್ಚ ಮಧುರಂ ಲೋಕೇ ಸಜ್ಜನಾನಾಂ ಸುಭಾಷಿತಂ ॥

ಎಂದು ನೀತಿಶಾಸ್ತ್ರವು ಹೇಳುತ್ತದೆ. ಮುಖಪ್ರಸನ್ನತೆಯು, ಪ್ರಸನ್ನದೃಷ್ಟಿಯು, ಅನುರಾಗವು, ಮಧುರ ವಚನವು, ಅಧಿಕಸ್ನೇಹವು, ಸಂಭ್ರಮದ ನೋಟವು, ಇವುಗಳು ಪ್ರೀತಿಯುಳ್ಳ ಜನರ ಲಕ್ಷಣಗಳಾಗಿರುವವು. ಜೇನು ಮಧುರವು ; ಅದಕ್ಕಿಂತಲೂ ದ್ರಾಕ್ಷಿ, ಅದಕ್ಕಿಂತಲೂ ಸಕ್ಕರೆ, ಅವೆಲ್ಲಕ್ಕಿಂತಲೂ ಸತ್ಪುರುಷರ ವಚನಗಳು ಮಧುರವಾದವುಗಳು.

ಬಡವನಾಗಲಿ, ಭಾಗ್ಯವಂತನಾಗಲಿ ಮಧುರವಚನವನ್ನಾಡಿದರೆ ಎಲ್ಲರೂ ಮೆಚ್ಚುವರು. ಆತನ ಸ್ಥಿತಿಗತಿಗಳನ್ನು ಯಾರೂ ಗಣಿಸರು. “ವಾಲ್ಟರ್ ಸ್ಕಾಟ್” ಎಂಬ ಕವಿಯು ತನ್ನಲ್ಲಿದ್ದ ಸಂಭಾವನೆಯಿಂದಲೇ ಒಳ್ಳೆಯವನೆನಿಸಿಕೊಂಡನು. ಡಾಕ್ಟರ್ ಜಾರ್ನ್ಸ್ ಎಂಬ ಅದ್ವಿತೀಯ ಪಂಡಿತನು ತನ್ನಲ್ಲಿದ್ದ ಒರಟುತನದಿಂದ ಅಪಯಶಸ್ಸನ್ನು ಪಡೆದನು. ಆತನಿಗೆ ಬಂಧುಮಿತ್ರರೆಂಬ ಭಾವನೆಯೇ ಇರಲಿಲ್ಲ. ತಾನು ಆಡಿದುದೇ ಮಾತು, ಹೂಡಿದುದೇ ಲಗ್ಗೆಯೆಂದು ತಿಳಿದು ಕಂಡವರನ್ನೆಲ್ಲಾ ಒರಟು ಮಾತುಗಳಿಂದಲೇ ಮಾತನಾಡಿಸುತ್ತಿದ್ದನು. ಇವನಷ್ಟು ಧರ್ಮಿಷ್ಟನಿರಲಿಲ್ಲ. ಆದರೆ ಅವನಲ್ಲಿ ಒಳ್ಳೆಯ ಮಾತೆಂಬುದರ ಗಂಧವಿರಲಿಲ್ಲ. ಶ್ರೀ ಕೃಷ್ಣನು ರಾಜಸೂಯಯಾಗದ ಕಾಲದಲ್ಲಿ ಧರ್ಮರಾಯನ ಕೈಕಾಲುಗಳನ್ನು ತೊಳೆದುದು

ಕೇವಲ ಸನ್ಮಾನದಿಂದಲೇ ; ಯೇಸುಕ್ರಿಸ್ತನು ತನ್ನ ಶಿಷ್ಯರ ಪಾದಧೂಳಿಯನ್ನು ತೆಗೆದುದು ಕೇವಲ ಸನ್ಮಾನದಿಂದಲೇ. ಮನೋವಾಕ್ಕಾಯಕರ್ಮಗಳಿಂದಲೂ ಜನರು ಸತ್ಕಾರವನ್ನೆ ಸಗಬೇಕು. ಆಗ ಅವರ ಸತ್ಕಾರಕ್ಕೆ ತಕ್ಕ ಫಲವು ದೊರೆತು ಕೀರ್ತಿವಂತರಾಗುವರು.

---

## ಪ್ರಕರಣ ೧೩

### ತೇಜಸ್ಸು—ಮನೋದಾರ್ಢ್ಯ.

ಪಂಥಕಟ್ಟಿ ಓಡಲು ನಿಂತವರಲ್ಲಿ ಯಾರೋ ಒಬ್ಬರು ಇತರರನ್ನು ಅತಿಕ್ರಮಿಸಿ ಓಡುವರು. ಪರೀಕ್ಷೆಗೆ ಕುಳಿತವರಲ್ಲಿ ಯಾರೋ ಒಬ್ಬರು ಪ್ರಥಮಸ್ಥಾನವನ್ನು ಪಡೆಯುವರು. ವ್ಯಾಪಾರಗಾರರಲ್ಲಿ ಯಾರೋ ಕೆಲವರು ಕೋಟ್ಯಧೀಶರಾಗುವರು. ಧರ್ಮಬೋಧೆಯನ್ನು ಕಿವಿಕೊಟ್ಟು ಕೇಳುವರಲ್ಲಿ, ಕೇಳಿದ ವಿಷಯವನ್ನು ಅನುಭವಕ್ಕೆ ತಂದುಕೊಳ್ಳುವರು ಕೆಲವರಿರಬಹುದು, ಅಥವಾ ಇಲ್ಲದೆಯೇ ಇರಬಹುದು. ಹೀಗೆ ಪ್ರಪಂಚದಲ್ಲೆಲ್ಲಿ ನೋಡಿದರೂ ಉತ್ತಮ, ಮಧ್ಯಮ, ಅಧಮಗಳೆಂಬ ಸ್ಥಾನ ಭೇದಗಳು ಕಾಣಬರುವುವು. ಈ ವಿಧವಾದ ಭೇದಭಾವಗಳು ದೈವಿಕವಲ್ಲ. ಎಲ್ಲರೂ ಒಂದೇ ಓಟವನ್ನು ಓಡಲು ಅಡ್ಡಿಯಿಲ್ಲ. ಎಲ್ಲರೂ ಪ್ರಥಮಸ್ಥಾನದಲ್ಲಿ ಉತ್ತೀರ್ಣರಾಗುವುದು ಪ್ರಮಾದವಲ್ಲ. ವ್ಯಾಪಾರಿಗಳೆಲ್ಲರೂ, ಕೋಟ್ಯಧೀಶ್ವರರಾಗುವುದಕ್ಕೆ ತೊಂದರೆಯಿಲ್ಲ. ಎಲ್ಲರೂ ಸತ್ಯಪರಾಯಣರಾಗುವುದಕ್ಕೆ ತೊಂದರೆಯಿಲ್ಲ. ಎಲ್ಲರೂ ಸತ್ಯಪರಾಯಣರಾಗುವುದಕ್ಕೆ ಭಗವಂತನ ಅಡ್ಡಿಯೇನಿದೆ? ಸರ್ವನಾಶಕ್ಕೂ ಮನು

ಷ್ಯನೇ ಕಾರಣನು. ಮೇಲೆ ಹೇಳಿದ ಜನರು ತಮ್ಮ ಮನೋದಾರ್ಢ್ಯವನ್ನು ಬಿಟ್ಟು ನಡೆದುದರಿಂದ ಸ್ಥಾನವ್ಯತ್ಯಾಸವಾಯಿತೆಂದು ಹೇಳಬಹುದು.

ವಾಣಿಜ್ಯ, ಕೈಗಾರಿಕೆಗಳಲ್ಲಿ ಪ್ರಖ್ಯಾತವಾದ ಅಮೇರಿಕಾ, ಯೂರೋಪು, ಜರ್ಮನಿ, ಜಪಾನ್ ಮುಂತಾದ ದೇಶಗಳಲ್ಲಿ ತಿರುಗಿ, ಅಂತಹ ಮಹೋನ್ನತ ಸ್ಥಿತಿಗೆ ನಮ್ಮ ಇಂಡಿಯಾದೇಶದ ವಿದ್ಯಾರ್ಥಿಗಳನ್ನು ತರಲೋಸುಗ, ಬೊಂಬಾಯ ಪ್ರಸಿದ್ಧವರ್ತಕರಾದ ತಾತಾಯವರು ಮನೋದಾರ್ಢ್ಯದಿಂದ ಅಮೌಲ್ಯವಾದ "ತಾತಾ ರಿಸರ್ಚ್ ಇನ್‌ಸ್ಟಿಟ್ಯೂಟ್" ಎಂಬ ಶಾಸ್ತ್ರಪರಿಶೋಧನಾಸಮಿತಿಯನ್ನು ಬೆಂಗಳೂರಲ್ಲಿ ಸ್ಥಾಪಿಸಿದರು. ಸರ್ ಶೇಷಾದ್ರಿ ಅಯ್ಯರವರು ಶಿವಸಮುದ್ರದಲ್ಲಿ ವಿದ್ಯುಚ್ಛಕ್ತಿಯ ಉತ್ಪತ್ತಿಗಾಗಿ ಪಟ್ಟ ಕಷ್ಟಗಳು ಅಪಾರವಾಗಿವೆ. ನಿಷ್ಪ್ರಯೋಜನವಾಗುವುದೆಂದು ಜನರು ಪ್ರತಿಭಟಿಸಿದರೂ ತಾವು ಉದ್ದೇಶಿಸಿದ ಮಹತ್ಕಾರ್ಯವನ್ನು ಅವರು ಬಿಡದೆ ಮನೋದಾರ್ಢ್ಯದಿಂದ ನೆರವೇರಿಸಿದರು. ಆದುದರಿಂದ ಮೈಸೂರು, ಬೆಂಗಳೂರು, ಉರಿಗಂ, ಈ ಸ್ಥಳಗಳಲ್ಲಿ ವಿದ್ಯುಚ್ಛಕ್ತಿಯ ದೆಸೆಯಿಂದ ವಾಣಿಜ್ಯ ಕೈಗಾರಿಕೆಗಳು ಈಗ ಉಚ್ಚಸ್ಥಾನದಲ್ಲಿರುವುದು ಪ್ರತ್ಯಕ್ಷವಾಗಿದೆ.

ರಾಜ್ಯಕೋಶಗಳನ್ನು ಬಿಗಿಹಿಡಿಯುವ ಮತ್ತು ಪ್ರಪಂಚದ ಸರ್ವ ಜನರನ್ನೂ ಮನವೊಲಿಯುವಂತೆ ಮಾಡುವ ಅನೇಕ ಮಹತ್ಕಾರ್ಯಗಳನ್ನು ನೋಡಿದರೆ ಮನೋದಾರ್ಢ್ಯಕ್ಕಿಂತಲೂ ಹೆಚ್ಚು ಪ್ರತಾಪವುಳ್ಳ ಮತ್ತೊಂದಂಶವು ನೆನಪಿಗೆ ಬರುವುದು. ಸ್ವಾಮಿ ವಿವೇಕಾನಂದಜಿಯುವರನ್ನು ನೋಡಿದರೆ ಅವರ ತೇಜಸ್ಸನ್ನು ಮರೆಯಲಾಗುವುದಿಲ್ಲ. ಮಹಾತ್ಮಾ ಗಾಂಧಿ, ಏಬ್ರಾ

ಮ್ ಲಿಂಕನ್, ರಾಣಾಪ್ರತಾಪಸಿಂಹ, ವಿಶ್ವಾಮಿತ್ರ, ಇವರೇ ಮೊದಲಾದ ಮಹಾಪುರುಷರು ಪರಮತೇಜಸ್ವಿಗಳೆಂದು ಹೆಸರು ಪಡೆದಿರುವರು. ತಮ್ಮ ತೇಜಸ್ಸಿನ ಬಲದಿಂದ ಇವರು ಸಾವಿರಾರು ಜನರನ್ನು ತಮ್ಮ ಕಡೆಗೆ ಸೆಳೆಯುವ ಸಾಮರ್ಥ್ಯವನ್ನು ಪಡೆದರು. ಯೇಸು ಕ್ರಿಸ್ತನನ್ನು ಸೆರೆಹಿಡಿದಾಗ ಜನರು ತುಂಬ ಬೆದರಿದರು. ಅವನ ತೇಜಸ್ಸು ಅವರನ್ನು ದೂರದಲ್ಲಿರಿಸಿತು.

ತೇಜಸ್ಸೆಂದರೆ ಅಂಗಸೌಂದರ್ಯವಲ್ಲ. ರೂಪ ರೇಖಾ ವಿಲಾಸ ವಿಭ್ರಮಣವಲ್ಲ. ಜಾತಿಪದ್ಧತಿಗೆ ಬಂದ ನಾಮ, ಕುಂಕುಮ, ಅರಿಸಿನ, ವಿಭೂತಿಗಳನ್ನು ಮೂಲೆಗೆಸೆದು, ಭಾಮಿನಿಯರಿಗೆಲ್ಲಾ ಬಣ್ಣದ ಬೂದಿಯನ್ನೂ ತೆಳುವಾದ ಬಟ್ಟೆಯನ್ನೂ ಅನುಗೊಳಿಸಿ, ಚಿತ್ರವಿಚಿತ್ರವಾಗಿ ಕತ್ತರಿಸಿದ ಮೀಸೆಗಳಿಂದಲೂ, ಕೊರಳಿಗೆ ಬಿಗಿದ ಬಣ್ಣದ ಬಟ್ಟೆಯಿಂದಲೂ ಸೃಷ್ಟಿಕರ್ತನು ಕೊಟ್ಟ ರೂಪನ್ನು ವಿಕಾರಗೊಳಿಸುವುದಲ್ಲ. ಷೇಕ್ಸ್ಪಿಯರ್ ಎಂಬ ಆಂಗ್ಲೇಯ ಮಹಾಕವಿಯು ಹೇಳಿರುವಂತೆ,

Costly thy habit as thy purse can buy
But not expressed in fancy ; rich but not gaudy
For the apparel often proclaims the man !

ಎಂದರೆ, ಬಟ್ಟೆಯನ್ನುಡಬೇಕಾದುದು ನ್ಯಾಯವೇ, ಆದರೆ ಹೆಮ್ಮೆಯಿಂದ ತನಗೆ ತರವಲ್ಲದ ಉಡಿಗೆತೊಡಿಗೆಗಳನ್ನು ಧರಿಸಿ ನೋಟಕರನ್ನು ಮೆಚ್ಚಿಸಲು ತಕ್ಕ ಬಿಂಕ ಬಡಿವಾರಗಳಿಂದ ಮೆರೆಯುವುದು ಮರುಳತನ ; ಬಿನ್ನಾಣದ ಬಟ್ಟೆಬರೆಗಳಂತೆಯೇ ಕೊಳಕು ಬಟ್ಟೆಗಳನ್ನು ಸಮಾಜದಲ್ಲಿ ಧರಿಸಬಾರದು. ಕೊಳಕುತನವನ್ನು ಕಂಡರೆ ಯಾರೂ ಸೇರರು. ಸ್ವಾಭಾವಿಕ ತೇಜ

ಸ್ಸಿಗೆ ಬಟ್ಟೆಯು ಹೊದಿಕೆಯುಂತಿರಬೇಕು. ಬಟ್ಟೆಯಿಂದ ತೇಜಸ್ಸು ಹುಟ್ಟುವುದಾದರೆ ಬಟ್ಟೆಯ ವ್ಯಾಪಾರಿಗಳು ಬಲು ಬೇಗ ಧನಿಕರಾದಾರು. ಸೌಂದರ್ಯಕ್ಕೂ ತೇಜಸ್ಸಿಗೂ ವ್ಯತ್ಯಾಸವಿದೆ. ಸಿಡ್ನಿ ಸ್ಮಿತ್, ಸೊಕ್ರೆಟಿಸ್ ಇವರೇ ಮೊದಲಾದವರು ಕುರೂಪಿಗಳು ; ಇವರ ಕುರೂಪು ದೈವನಿಯಾಮಕವಾಗಿದ್ದಿತು. ಆದರೆ, ಇತರರನ್ನು ಆಕರ್ಷಿಸುವ ತೇಜಸ್ಸು ಇವರಲ್ಲಿದ್ದಿತು. ಆದುದರಿಂದ ತೇಜಸ್ಸು ರೂಪವಲ್ಲ ; ಇರುವ ರೂಪು ಸ್ವಾಭಾವಿಕ ಕಳೆಯೊಂದಿಗೆ ಬೆರೆತರೆ ಅದು ತೇಜಸ್ಸಾಗಬಹುದು.

ಕಳೆಯೆಂಬುದನ್ನು ಬೇಡಿ ಪಡೆಯಲಾಗದು. ತನ್ನ ವೃತ್ತಿಗೆ ತಕ್ಕ ಕಳೆಯು ಮನುಷ್ಯನಿಗುಂಟಾಗುವುದು. ಈ ಕಳೆಯು ಆರೋಗ್ಯದ ವಶದಲ್ಲಿಯೇ ಹೊರತು, ಡಾಂಭಿಕತನದ ಉಡಿಗೆತೊಡಿಗೆಗಳ ವಶದಲ್ಲಿಲ್ಲ. ಆರೋಗ್ಯದ ಪೂರ್ಣಾವಸ್ಥೆಯಲ್ಲಿರುವವನಿಗೆ ತೇಜಸ್ಸುಂಟಾಗಿ ತನ್ನ ವೃತ್ತಿಯಲ್ಲಿ ಪ್ರಾಮುಖ್ಯತೆಯನ್ನು ಪಡೆಯುವನು ; ಹತ್ತು ಜನರಿಗೆ ಯಜಮಾನನಾಗುವನು. ಆರೋಗ್ಯಸಾಧನೆಯಿಂದಲೇ ದೃಢಾಂಗರೂ ತೇಜೋವಿರಾಜಿತರೂ ಆದ ಜ್ಯೂಲಿಯಸ್ ಸೀಸರ್ ಮೊದಲಾದ ರೋಮನರು ಉದ್ಭವಿಸಿದರು. ಆರೋಗ್ಯಸಾಧನೆಯಿಂದಲೇ ನಾರದ, ವ್ಯಾಸ, ವಾಲ್ಮೀಕಿ, ವಿಶ್ವಾಮಿತ್ರ ಮೊದಲಾದವರು ದಿವ್ಯತೇಜಸ್ಸನ್ನು ಪಡೆದರು. ಆರೋಗ್ಯಸೂತ್ರವನ್ನು ಅತಿಕ್ರಮಿಸಿ ನಡೆದರೆ ತೇಜಸ್ಸು ದೂರವಾಗುವುದು. ಕಾಮಾಲೆಯ ರೋರೆಯೂ, ಡೊಂಕು ಕೈಕಾಲುಗಳೂ, ದೊಡ್ಡ ಹೊಟ್ಟೆಯೂ ಉಂಟಾಗಿ ಮನುಷ್ಯನು ಭೂಮಿಗೆ ಹೊರೆಯಾಗಿ ಸಾಯಬೇಕಾಗುವುದು.

ಕೋಪ ತಾಪಗಳಿಂದ ನರಳುತ್ತಿರುವವನಿಗೆ ತೇಜಸ್ಸುಂಟಾಗುವುದಿಲ್ಲ. ನಿತ್ಯ ನಿರ್ಮಲಚಿತ್ತನಾಗಿ ಕರ್ತವ್ಯಪರಾಯಣ

ನಾಗಿ ಶರೀರಾರೋಗ್ಯವನ್ನು ಎಚ್ಚರಿಕೆಯಿಂದ ಕಾಪಿಡುತ್ತ ನಡೆವನಿಗೆ ಕಾಲೋಚಿತವಾಗಿ ಕಳೆಯೇರುವುದು. ದೈವಿಕವಾದ ವಿಕಾರಗಳಿದ್ದರೂ ಪ್ರಾಪ್ತವಯಸ್ಸಾದ ಮೇಲೆ ಬರುವ ಕಳೆಯು ಅವುಗಳನ್ನು ಮರೆಮಾಡುವುದು. ಆಧ್ಯಾತ್ಮಿಕವಾದ ಎಂದರೆ ಸ್ವಪ್ರಯತ್ನಪೂರ್ವಕವಾದ ವಿಕಾರಗಳನ್ನು ಕಲ್ಪಿಸಿಕೊಂಡರೆ ತೇಜಸ್ಸು ಬರುವುದಿಲ್ಲ.

ಈ ಪ್ರಕರಣದ ಆದಿಯಲ್ಲಿ ಮನೋದಾರ್ಢ್ಯವೆಂಬುದನ್ನು ಸೂಚಿಸಿದೆ. ಮಹಾತೇಜಸ್ವಿಯಾದ ಮನುಷ್ಯನಿಗೆ ಮನೋದಾರ್ಢ್ಯವಿರುತ್ತದೆಂದು ಹೇಳಲಾಗುವುದಿಲ್ಲ. ಇವೆರಡೂ ಕಲೆಯುವುದಾದರೆ ಮನುಷ್ಯನು ಪ್ರಪಂಚದಲ್ಲಿ ಬಲು ಬೇಗನೆ ತಲೆಯೆತ್ತುವನು. ಕರ್ಣಾಟಕ ಕವಿಯೋರ್ವನು ತನ್ನ ತತ್ವಗ್ರಂಥದಲ್ಲಿ,

ದೃಢಮನವಿಲ್ಲದೆ ಅರೆಗಣ್ಣ ಮುಚ್ಚಿಕೊಂಡು ।
ಮೃಡಜಪ ಮಾಡಿದರೇನು ಫಲ।

ಎಂಬುದಾಗಿ ಹಾಡಿರುವನು. ಜೂಲಿಯಸ್ ಸೀಸರ್, ನೆಪೋಲಿಯನ್, ಗೋಖಲೆ, ಮೊದಲಾದ ಪರಮತೇಜಸ್ವಿಗಳು ತಮ್ಮ ಮನೋದಾರ್ಢ್ಯದ ಬಲದಿಂದ ಕೀರ್ತಿವಂತರಾದರು. ಸೀಸರನು ಇಟಲಿಯನ್ನು ಜಯಿಸಲು ದಂಡೆತ್ತಿ ಹೊರಟಾಗ "ರುಬಿಕನ್" ಎಂಬ ನದಿಯನ್ನು ದಾಟಬೇಕಾಗಿದ್ದಿತು. ತನ್ನಲ್ಲಿರುವ ದೋಣಿಗಳ ಸಹಾಯದಿಂದ ನದಿಯನ್ನು ದಾಟಿದ ಮೇಲೆ ಆ ದೋಣಿಗಳನ್ನಿರಗೊಡದೆ, ಅವುಗಳು ನದಿಯ ದಡದಲ್ಲಿದ್ದ ಪಕ್ಷದಲ್ಲಿ, ಶತೃಸೈನಿಕರಿಂದ ಪರಾಜಿತರಾದ ತನ್ನವರು ಸ್ವದೇಶಕ್ಕೆ ಹಿಂತಿರುಗಲು ಆಸ್ಪದವಾಗುವುದೆಂದು ಯೋಚಿಸಿ, ಅವುಗಳನ್ನು ಸುಟ್ಟುಬಿಟ್ಟನು. "ನೆಪೋಲಿಯನ್ ಬೋನಪಾರ್ಟ"

ನು ದೃಢಮನವಿಲ್ಲದೆ ಎಂದಿಗೂ ಚಕ್ರವರ್ತಿಯಾಗುತ್ತಿರಲಿಲ್ಲ. "ಅಸಾಧ್ಯ" ವೆಂಬುದರ ಅರ್ಥವೇ ಅವನಿಗೆ ತಿಳಿಯದು. ಅಂತಹ ಮಾತು ನಿಘಂಟಿನಲ್ಲಿದ್ದರೆ ಅಳಿಸಿಬಿಡಬೇಕೆಂದು ಅವನು ಹೇಳುತ್ತಿದ್ದನು. ಮನೋದಾರ್ಢ್ಯವೇ ಸರ್ವಜಯಕ್ಕೂ ಮೂಲವೆಂದು ಅವನು ಸಾರುತ್ತಿದ್ದನು.

ಅತುಳೈಶ್ವರ್ಯದಿಂದಾಗಲಿ, ಬಿರುದಾವಳಿಗಳಿಂದಾಗಲಿ, ಅರಮನೆಯ ವಾಸದಿಂದಾಗಲಿ ಎರಡು ಕಾಲಿನ ಈ ನರದೇಹವು "ಮನುಷ್ಯ" ನೆನಿಸಿಕೊಳ್ಳಲಾರದು. ದೃಢಮನವಿಲ್ಲದ ನರದೇಹವು ಮೃಗಕ್ಕೆ ಸಮಾನವಾದುದು. ಪ್ರಯತ್ನಪಟ್ಟ ಕಾರ್ಯವನ್ನು ಕೈಬಿಟ್ಟು, " ಇಂದು, ನಾಳೆ " ಎಂದು ಕಾಲಹರಣ ಮಾಡುವುದು ಜಾಣತನವಲ್ಲ. ದೃಢಮನಸ್ಸಿನಿಂದ ಪ್ರಾರಂಭಿಸಿದರೆ ಕೆಲಸವು ಸರಾಗವಾಗಿ ನೆರವೇರುವುದು.

**ಹೂಡಿದ ಕಾರ್ಯವ ಬಿಟ್ಟವನ |**
**ರೂಢಿಯೊಳತಿನೀಚನೆಂದು ಕಾಂಬರು ಜನರು ||**
**ಮೋಡವು ಮುತ್ತಲು ಸೂರ್ಯನು |**
**ನಾಡಿಗೆ ಬೆಳಕಿತ್ತು ಮುಂದೆ ಸಾಗದೆ ಬಿಡನು ||**

ಎಂಬುದಾಗಿ ಓರ್ವ ಕವಿಯು ನುಡಿದಿರುತ್ತಾನೆ. ಪ್ರಯತ್ನಪಟ್ಟು ಹೊರಟ ಮೇಲೆ ಹಿಂದೆ ಮುಂದಾಡುವುದು ವಿವೇಕವಲ್ಲ. ಆತುರಪಡುವುದು ತಪ್ಪು. ಕೆಲಸವು ಸ್ವಲ್ಪವೆಂದು ಅಸಡ್ಡೆ ಮಾಡಬಾರದು. ಹಿಡಿದ ಕೆಲಸವನ್ನು ಶಾಂತಿಯಿಂದಲೂ, ದೃಢಮನದಿಂದಲೂ ಮಾಡುತ್ತ ಬಂದರೆ, "ಹುಲ್ಲ ಕಡ್ಡಿ" ಯಂತಹ ಕೆಲಸವಾದರೂ ತಕ್ಕ ಫಲವನ್ನು ಕೊಡುತ್ತದೆ. ಮಹಾ ಮಹಾ ಕಾರ್ಯಗಳಲ್ಲಿ ಕೈಯಿಟ್ಟವರು ಮನೋದಾರ್ಢ್ಯದಿಂದ ನಡೆಯುವುದಾದರೆ ಜಯಶೀಲರಾಗುವರು. ಆಗ

ಅವರ ತೇಜಸ್ಸೂ, ಮನೋದಾರ್ಢ್ಯವೂ, ಇತರರಿಗೆ ಮೇಲಪಂಗ್ತಿಯಾಗಿ ಸೋಮಾರಿಗಳು ಪುನಃ ಧೈರ್ಯಗೊಂಡು, ಈ ಪ್ರಪಂಚದಲ್ಲಿ ಹುಟ್ಟಿದುದಕ್ಕೆ ತಮ್ಮ ಕೈಲಾದ ಕೆಲಸವನ್ನು ಮಾಡುತ್ತ, ಪರಂಧಾಮವನ್ನೈದಲು ದಾರಿಯಾಗುವುದು.

---

## ಪ್ರಕರಣ ೧೪

### ಅಭ್ಯಾಸ—ಸ್ವಭಾವ.

ಹಿಂದಣ ಪ್ರಕರಣಗಳಲ್ಲಿ ಹೇಳಿರುವ ಸುಗುಣಗಳು ಸರ್ವಮಾನ್ಯವಾದವುಗಳು. ಅವುಗಳನ್ನು ಕಾಲಕ್ರಮೇಣ ಯಾರು ಪರಿಗ್ರಹಿಸುವರೋ ಅವರೇ ಧನ್ಯರು. ಆರೋಗ್ಯವಂತರಾಗಿ ದೀನದಯಾಪರತೆ, ಸಂಕಲ್ಪಸಾಧನೆ, ಆತ್ಮಾವಲಂಬನೆ, ಸತ್ಯಸಂಧತೆ, ದಿಟ್ಟತನ, ಕುತೂಹಲ, ದೂರಾಲೋಚನೆ, ದೃಢಸಂಕಲ್ಪ, ಎಂಬೀ ಸುಗುಣಗಳಿಂದ ಕೂಡಿ, ಅರಿಷಡ್ವರ್ಗಗಳನ್ನು ಹಿಂದಕ್ಕೆ ನೂಕಿ, ಮಾನದ ಮೇಲೆ ಗುರಿಯಿಟ್ಟು, ಸವಿನುಡಿ, ಸರಸಸಂಭಾಷಣೆಗಳಿಂದಲೂ, ಅತ್ಯಾದರದಿಂದಲೂ ನೆರೆಹೊರೆಯವರನ್ನು ಪ್ರೀತಿಗೊಳಿಸಿ, ಅವಕಾಶವು ಒದಗಿದಾಗ ಸಾವಕಾಶಮಾಡದೆ ಎಚ್ಚರಿಕೆಯಿಂದ ನಡೆಯುವ ಜನರು ತಮ್ಮ ಉನ್ನತಾಪೇಕ್ಷೆಯನ್ನು ಪಡೆಯುವರು. ಅವರೇ ದೇವಾಂಶ ಸಂಭೂತರು ; ಅವರಿಂದಲೇ ಜಗತ್ತಿನಲ್ಲಿ ಸುಖಶಾಂತಿಗಳು ನೆಲೆಗೊಳ್ಳುವವು. ಅವರ ಕೂಟವು ಸ್ವರ್ಗಸುಖವನ್ನೀಯುವುದು. ಆದರೆ, ಗುಣಾಢ್ಯರೆನಿಸಿದ ಅನೇಕರು "ಅಭ್ಯಾಸ" ವೆಂಬ ತೆರೆಯ ಮರೆಯಲ್ಲಿ ಅತಿ ಹೇಯವಾದ ಆಚರಣೆಗಳನ್ನಿಟ್ಟುಕೊಂಡು, ಭಗವದನುಗ್ರಹದಿಂದ ತಮಗೊದಗಿದ ಗುಣಾತಿಶಯಗಳನ್ನು ಕೆಡಿಸಿ

ಕೊಂಡು ಬಾಳುತ್ತಿರುವರು. ಅವರ ಅನಾಚಾರವು ಒಳಗೂ ಹೊರಗೂ ಕಾಣಿಸಿಕೊಂಡು, ತಮ್ಮ ಪದವಿಗೂ, ವಂಶಕ್ಕೂ, ತಾಯಿತಂದೆಗಳಿಗೂ ಅಪಕೀರ್ತಿಯನ್ನು ತಂದಿರಿಸುವುದಲ್ಲದೆ, ಅವರು ಪ್ರವೇಶಿಸಿದ ಕಡೆಯಲ್ಲೆಲ್ಲಾ ಸರ್ವನಾಶವನ್ನುಂಟುಮಾಡುವುದೂ ಉಂಟು. ಅತ್ತೆಯೊಡೆದ ಪಾತ್ರೆಗೆ ಬೆಲೆಯಿಲ್ಲವೆಂಬುದು ನಿಜ ; ಒಡೆದ ಪಾತ್ರೆಗೆ ಪ್ರತಿಪಾತ್ರೆಯನ್ನು ತಂದಿರಿಸಬಹುದು ; ಆದರೆ ಕೆಟ್ಟುಹೋದ ಮಾನವನ್ನು ತೊಳೆದರೆ ಪ್ರಕಾಶಹೊಂದಲಾರದು. ಮಾನಹಾನಿಯಾದ ಬಳಿಕ ಪರಿಹಾರವು ಕನಸಿನ ವಶದಲ್ಲಿಯಾಗಲಿ ಮನಸಿನ ವಶದಲ್ಲಿಯಾಗಲಿ ಇರುವುದಿಲ್ಲ.

ಸಾವಿರಾರು ರೂಪಾಯಿಯ ಸರದಾರನಿಗೆ ಮಾದಕ ಪದಾರ್ಥಗಳ ಬಡಿವಾರ ; ವಿರಕ್ತಸನ್ಯಾಸಿಗೆ ಬಂಗಿಯ ವಿನ್ಯಾಸ ; ಜತೆಗೆ ಸ್ತ್ರೀವ್ಯಾಮೋಹದುಪನ್ಯಾಸ ; ಸರಸ್ವತಿಗೆ ಸಮಾನವಾದ ವಿದ್ಯಾಬುದ್ಧಿಯುಳ್ಳವಳಿಗೆ ಪರಪುರುಷನನ್ನು ಬಯಸುವ ಕುಹಕಬುದ್ಧಿ ; ಸದ್ವಂಶಜಾತರಾದ ಬಾಲಕರಿಗೆ ಜಾತಿಪದ್ಧತಿಯನ್ನು ಬಿಟ್ಟು ನಡೆಯುವ ನವನಾಗರಿಕತೆ ; ಹೀಗೆ ಮಾನವರು ತಮ್ಮ ಸುಗುಣಪ್ರಭಾವದಿಂದ ಉನ್ನತಾವಸ್ಥೆಯನ್ನು ಪಡೆಯುವಷ್ಟರಲ್ಲಿಯೇ ದುರಭ್ಯಾಸಗಳು ಪುನಃ ಮೆಲ್ಲ ಮೆಲ್ಲನೆ ಅವರನ್ನು ಆಕ್ರಮಿಸಿಬಿಡುವವು. ಕುಂಬಾರನಿಗೆ ವರ್ಷ, ದೊಣ್ಣೆಗೆ ನಿಮಿಷವೆಂಬುದು ನಿಜವಾದ ಮಾತು; ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲ ; ಕೀರ್ತಿಯು ಕಾಣಿಸಿಕೊಳ್ಳುವುದರೊಳಗಾಗಿ ಅಪಕೀರ್ತಿಯು ಹಬ್ಬಿತು. ಈ ರೀತಿಯಾದ ಅಪಹಾಸ್ಯಕ್ಕೆ ಗುರಿಯಾದ ಜನರು ತಮ್ಮ ತಮ್ಮ ದುರಾಚಾರಗಳನ್ನು ಮುಚ್ಚಲು "ಅಭ್ಯಾಸ, ಅಭ್ಯಾಸ" ವೆಂಬ ಶಾಸನವನ್ನು ಮಾಡಿಕೊಳ್ಳು

ತ್ತಾರೆ. ಅಯ್ಯೋ, ಅಭ್ಯಾಸವೇ, ಮನುಷ್ಯನ ಸ್ವಭಾವವನ್ನು ಕೆಡಿಸುವ ಶಕ್ತಿಯು ನಿನಗುಂಟಾಯಿತೇ ? ಆತನ ಸ್ವಭಾವವನ್ನು ಸದಾಚಾರದ ಸಂಪರ್ಕದಿಂದ ಬೆಳಗಿಸುವ ಶಕ್ತಿ ಸಾಹಸಗಳು ನಿನ್ನಲ್ಲಿದ್ದರೂ ಈ ದುರ್ವ್ಯಾಪಾರಗಳಿಗೆ ಮನುಷ್ಯನ ಮನವನ್ನು ಸೆಳೆಯಬಹುದೇ ? ಎಲೈ ಚಂಚಲಮತಿಯಾದ ಮಾನವನೇ, ನಿನ್ನ ದುರಾಚಾರವನ್ನು ಬಿಡು ; ಯಾವ ಸುಗುಣಗಳು ನಿನ್ನನ್ನು ಗೌರವಸ್ಥಾನಕ್ಕೆ ತಂದುಬಿಟ್ಟವೋ, ಆ ಗುಣಗಳನ್ನೇ ಕಡೆಯ ತನಕ ಬಿಗಿಯಾಗಿ ಹಿಡಿದು ನಡೆ; ಗೌರವಸ್ಥಾನವನ್ನೇರಿದ ಮೇಲೆ ಚಪಲ ಚಿತ್ತದಿಂದ ಅಗೌರವವೃತ್ತಿಗೆ ವಶನಾಗಿ ಕೆಡಬೇಡ. ಅಭ್ಯಾಸ ಮಾಡಬೇಕೆಂಬ ಇಷ್ಟವುಳ್ಳವನಾದರೆ, ನಿನ್ನನ್ನು ಈ ಪ್ರಪಂಚದ ಕುಂದುಕೋಟಲೆಗಳಿಂದ ಬಿಡಿಸುವ ಸದ್ಧರ್ಮಗಳನ್ನು ಅಭ್ಯಾಸಮಾಡಿಕೋ. ಲಾರ್ಡ್ ಬೇಕರ್ನರವರು ಹೇಳಿರುವಂತೆ,

"Habit, if wisely and skilfully formed,
becomes truly a second nature"

ಎಂದರೆ ಅಭ್ಯಾಸದಿಂದ ಕಲಿತ ವಿದ್ಯೆಯು ಕಡೆಗೆ ಸ್ವಭಾವವಾಗಿ ಪರಿಣಮಿಸುವುದು. ದುರ್ವ್ಯಾಪಾರಗಳನ್ನು ಅಭ್ಯಾಸ ಮಾಡಿದರೆ ಸ್ವಭಾವವು ಕೆಟ್ಟುಹೋಗುವುದು. ಆದುದರಿಂದ ಅಭ್ಯಾಸಯೋಗ್ಯವಾದ ಕೆಲವು ಪದ್ಧತಿಗಳನ್ನು ಇಲ್ಲಿ ತಿಳಿಯಪಡಿಸುವೆವು.

ಅರುಣೋದಯಕ್ಕೆ ಮುಂಚೆ ಹಾಸಿಗೆಯನ್ನು ಬಿಡು. ಹೊತ್ತಿಗೆ ಮುಂಚೆ ಏಳುವುದರಿಂದ ಮನಸ್ಸಿಗೆ ಲವಲವಿಕೆಯುಂಟಾಗಿ, ಮುಂದಣ ಕೆಲಸಗಳು ಅಂದವಾಗಿ ನೆರವೇರುವುವು.

ಅತಿ ನಿದ್ರೆಯು ಹಾನಿಕರವಾದುದು. ಅದರಿಂದ ಮನುಷ್ಯನಿಗೆ ಮಂಕು ಕವಿದು ಮನೋವ್ಯಾಪಾರಗಳು ಬದಲಾಯಿಸುವವು. ವಿದ್ಯಾರ್ಥಿಗಳು ಬೆಳಗಿನ ಜಾವದಲ್ಲಿ ಎದ್ದು ಓದುವುದರಿಂದ ವಿಷಯಗಳು ಚೆನ್ನಾಗಿ ಮನಸ್ಸಿಗೆ ನಾಟುವವು. ಸರ್ ವಾಲ್ಟರ್ ಸ್ಕಾಟ್, ವಿಲಿಯಂ ಷೇಕ್ಸ್‌ಪಿಯರ್, ವರ್ಡ್ಸ್‌ವರ್ತ್, ಮಿಲ್ಟನ್ ಮೊದಲಾದ ಆಂಗ್ಲೇಯ ಕವಿಶ್ರೇಷ್ಠರು ಬೆಳಗಿನ ಐದುಗಂಟೆಗೆ ಮೊದಲೇ ಹಾಸಿಗೆಯನ್ನು ಬಿಡುತ್ತಿದ್ದರೆಂದು ಅವರ ಜೀವನ ಚರಿತ್ರೆಗಳಿಂದ ತಿಳಿಯಬರುತ್ತದೆ. ದಾದಾಬಾಯಿ ನವರೋಜಿ, ಗೋಖಲೆ ಇವರೇ ಮೊದಲಾದ ದೇಶಭಕ್ತರು ಮುಂಜಾನೆ ಏಳುತ್ತಿದ್ದರು. ಈ ಪದ್ಧತಿಯನ್ನು ಅಭ್ಯಾಸದಿಂದ ಕಲಿಯ ಬಹುದು. "ಬಫನ್" ಎಂಬ ಸಸ್ಯಶಾಸ್ತ್ರಜ್ಞನು ಸೂರ್ಯೋದಯವಾದ ಮೇಲೆಯೂ ಮಲಗುತ್ತಿದ್ದನಂತೆ. ಈ ಪದ್ಧತಿಯನ್ನು ತಪ್ಪಿಸಬೇಕೆಂದು ಆತನು ತನ್ನ ಸೇವಕನನ್ನು ಕರೆದು, ನನ್ನನ್ನು ಹೊತ್ತಿಗೆ ಮುಂಚೆ ಎಚ್ಚರಗೊಳಿಸುವುದಾದರೆ ನಿನಗೆ ಬಹುಮಾನವು ದೊರಕುವುದೆಂದು ಹೇಳಿಕಳುಹಿಸಿದನು. ಮಾರನೆಯ ದಿನ ಸೇವಕನು ಹಾಸಿಗೆಯ ಬಳಿಗೆ ಬಂದು ಕೂಗಲು, ಸುಖನಿದ್ರೆಯು ಕೆಟ್ಟಿತೆಂದು ಕೋಪಗೊಂಡು ಯಜಮಾನನು ಆತನನ್ನು ದಂಡಿಸಿ ಓಡಿಸಿಬಿಟ್ಟನು. ಸೇವಕನಿಗೆ ಅದರ ಅರ್ಥವು ತಿಳಿಯಲಿಲ್ಲ. ಆದರೆ ಪ್ರತಿ ಪ್ರಾತಃಕಾಲವೂ ಅವನು ಕೂಗುವುದನ್ನು ಬಿಡಲಿಲ್ಲ. ಬೆಳಗಿನ ಮರ್ಯಾದೆಯು ಪೆಟ್ಟು ತಪ್ಪಲಿಲ್ಲ. ಕಡೆಗೆ ಕೂಗುವುದು ಸರಿಯಲ್ಲವೆಂದು ನಿಶ್ಚಯಿಸಿ, ಸೇವಕನು ಬೆತ್ತದಿಂದ ಹೊಡೆಯಲು ಪ್ರಾರಂಭಿಸಿದನು. ಕೆಲವು ದಿನಗಳ ವರೆಗೆ ಇಬ್ಬರಿಗೂ ಜಗಳವಾಗುತ್ತಿದ್ದಿತು. ಆದರೆ ಕಾಲಕ್ರಮದಲ್ಲಿ "ಬಫನ್" ನ್ನಿನ ನಿದ್ರೆಯು ತೊಲಗಿ, ಅವನಿಗೆ

ಮುಂಜಾನೆ ಏಳುವ ರೂಢಿಯುಂಟಾಯಿತು. ಸೇವಕನಿಗೆ ಬಹುಮಾನವೂ ಸಿಕ್ಕಿತು. ಎರಡನೆಯದಾಗಿ,

ಯೋಗಾಭ್ಯಾಸ ಮಾಡು.

ಇದನ್ನೇ ಚಿತ್ತೈಕಾಗ್ರತೆಯೆಂದು ಹೇಳುವರು. ಯಾವ ಮಹತ್ಕಾರ್ಯವೇ ಆಗಲಿ ಚಿತ್ತೈಕಾಗ್ರತೆಯ ಬಲದಿಂದಲೇ ಮುಂದುವರಿಯಬೇಕು. ಮೈಸೂರು ದೇಶದ ಕೃಷ್ಣರಾಜಸಾಗರ, ಶಿವಗಂಗೆಯ ಕೋಡುಗಲ್ಲಿಗೆ ಕಟ್ಟಿದ ಗಂಟೆ, ಥೇಮ್ಸ್ ನದಿಯ ಕೆಳಗೆ ಕಟ್ಟಿರುವ ಸುರಂಗಮಾರ್ಗ, ಗ್ರಹಣಗಳ ಕಾಲ ನಿರ್ಣಯ ಇವೇ ಮೊದಲಾದ ಕಾರ್ಯಗಳಿಗೆ ಮನಸ್ಸನ್ನು ಬಿಗಿ ಹಿಡಿದು ಹಗಲೂ ರಾತ್ರಿಯೂ ಚಿಂತನೆಯನ್ನು ಮಾಡದಿದ್ದರೆ, ತಕ್ಕ ಉಪಾಯವು ಹೊಳೆಯುತ್ತಿರಲಿಲ್ಲ. ತಾನು ಯೋಚಿಸಿ ಮತ್ತೊಬ್ಬನು ಮಾಡುವುದು ಉಚಿತವಲ್ಲ. ತನ್ನ ಅಭಿಪ್ರಾಯಗಳನ್ನು ಇತರರು ಅರಿತುಕೊಳ್ಳಲಾರರು. ಕೆಲವು ವಿಷಯಗಳಲ್ಲಿ ಮಾತ್ರ ಯೋಚಿಸಿ ತಿಳಿಯುವನೊಬ್ಬನೂ, ತಿಳಿದುದನ್ನು ಮಾಡುವನೊಬ್ಬನೂ ಇರಬೇಕೆಂದು ತೋರುತ್ತದೆ ಆದರೆ ತನ್ನ ಕಾರ್ಯಕ್ಕೆ ಪರರ ಆಸರೆಯನ್ನು ನಚ್ಚುವುದರಿಂದ ಅನೇಕ ವೇಳೆ ಕಾರ್ಯಭಂಗವಾಗುತ್ತದೆ.

ಮುಖ್ಯವಾಗಿ ತಪಸ್ವಿಗಳೂ, ಮಹಾತ್ಮರೂ, ವಿದ್ಯಾರ್ಥಿಗಳೂ ಯೋಗಾಭ್ಯಾಸ ಮಾಡಬೇಕು. ಈ ಅಭ್ಯಾಸದಿಂದ ಮನಸ್ಸನ್ನು ಸ್ವಾಧೀನಪಡಿಸಿಕೊಂಡವನಿಗೆ ಎಂತಹ ವಿದ್ಯೆಯಾದರೂ ಬರುವುದಕ್ಕೆ ಅಡ್ಡಿಯಿಲ್ಲ. "ಸೊಕ್ರೆಟಿಸ್" ಎಂಬ ತತ್ವಶಾಸ್ತ್ರಜ್ಞನು ಒಂದು ದಿನ ಬೀದಿಯ ಒಂದು ಪಕ್ಕದಲ್ಲಿ ನಿಂತು ಯೋಚಿಸುತ್ತಿದ್ದನು. ಸಾಯಂಕಾಲವಾದರೂ ಅವನು

ಅಲ್ಲಿಯೇ ಇದ್ದನು. ಜನರು ಆತನನ್ನು ನೋಡಿ ಬೆರಗಾಗಿ ರಾತ್ರೆಯೆಲ್ಲಾ ಆತನ ಸುತ್ತಲೂ ಚಾಪೆಗೆಳನ್ನು ಹಾಸಿ ಕಾವಲಿದ್ದರು. ರಾತ್ರಿಯು ಮುಗಿದರೂ ಅವನು ಇನ್ನೂ ಯೋಚಿಸುತ್ತಲೇ ನಿಂತಿದ್ದನು. ಸೂರ್ಯೋದಯವಾಗಲು ಆತನು ಮುಂದಕ್ಕೆ ಹೋದನಂತೆ. ಇದೀಗ ನಿಜವಾದ ಯೋಗ; ಇದನ್ನೇ ಚಿತ್ತೈಕಾಗ್ರತೆಯೆಂಬರು. ಇಪ್ಪತ್ತುನಾಲ್ಕು ಗಂಟೆಗಳ ಕಾಲ ಯೋಚಿಸುತ್ತ ನಿಂತಿದ್ದ ಈತನ ಯೋಗಾಭ್ಯಾಸವು ಈಗಲೂ ಇತರರಿಗೆ ಮೇಲುಪಂಗ್ತಿಯಾಗಿದೆ.

ಮಾತು ಕಥೆಗಳಲ್ಲಿ ಸಂಕ್ಷೇಪವಿರಬೇಕು.

**ರಾಗರಸ ಮಿಗಿಲು ಸಭೆ ಕಲೆ |**
**ದೂಗಲು ತಾ ನುಡಿಯು ಬಲ್ಲೊಡದ ನುಡಿ ಇನಿಸೊಂ ||**
**ದಾಗದಿರೆ ಸೈತು ಮಾಗೆಯ**
**ಕೋಗಿಲೆಯಂತಿಹುದು ಸುಗುಣರತ್ನಕರಂಡಾ ||**

ಎಂಬುದಾಗಿ ಕವಿಯು ಹೇಳಿರುತ್ತಾನೆ. ಹರಟೆಯ ಮಲ್ಲನ ಮಾತನ್ನು ಯಾರೂ ಕಿವಿಗೊಟ್ಟು ಕೇಳುವುದಿಲ್ಲ. ಬಡಾಯ ಮಾತುಗಳಿಂದ ಪ್ರಯೋಜನವಿಲ್ಲ. ಕೇಳಿದವರನ್ನು ಉಲ್ಲಾಸಗೊಳಿಸುವ ಒಂದು ದೂರಾಲೋಚನೆಯ ಮಾತು ಲೋಕೋಪಕಾರವನ್ನುಂಟುಮಾಡುತ್ತದೆ. ಬರವಣಿಗೆಯಲ್ಲಿಯೇ ಆಗಲಿ, ಮಾತಿನಲ್ಲಿಯೇ ಆಗಲಿ ಸಂಕ್ಷೇಪವಿರಬೇಕು. ಬರೆದುದನ್ನೇ ಬರೆಯುವ ಮತ್ತು ವಿಷಯಕ್ಕೆ ತಕ್ಕಷ್ಟು ಪದ ಸಂಯೋಜನೆಯಿಲ್ಲದ, ಗ್ರಂಥವು ನಿಷ್ಪ್ರಯೋಜನವಾದುದು. ಅದರಂತೆಯೇ ವಿಷಯವನ್ನು ಕುರಿತು ಸ್ವಾರಸ್ಯವಾದ ಮಾತುಗಳನ್ನಾಡದೆ ಬರಿಯ ಮಾತಿನ ಜೋಡಣೆಯಲ್ಲಿಯೇ ಕಾಲ ಕಳೆಯುವನ ಸಂಭಾಷಣೆಯು ನಷ್ಟವನ್ನುಂಟುಮಾಡುತ್ತದೆ.

ತಾನು ಹೇಳುವ ಅಥವಾ ಬರೆಯುವ ವಿಷಯವನ್ನು ಚೆನ್ನಾಗಿ ತಿಳಿದಿರುವವರು ಎಂದಿಗೂ ವಾಗಾಡಂಬರದಿಂದ ಕಾಲವನು ಕಳೆಯುವುದಿಲ್ಲ. ಏಬ್ರಾಂಹ್ ಲಿಂಕರ್ನರವರು ಅಮೇರಿಕದ ಪ್ರೆಸಿಡೆಂಟರಾಗಿದ್ದಾಗ, ಸೇನಾಶಾಖೆಯ ಗುಮಾಸ್ತನು ಕಾಗದದ ದೊಡ್ಡ ಕಂತೆಯನ್ನು ಅವರ ಮುಂದೆ ತಂದಿಟ್ಟನು. ಸೈನ್ಯದ ಆಯವ್ಯಯಗಳನ್ನು ತಿಳಿಸುವ ಪಟ್ಟಿಯ ಜತೆಗೆ ಕೆಲಸಕ್ಕೆ ಬಾರದ ದೊಡ್ಡ ಕಂತೆಯಿರುವುದನ್ನು ನೋಡಿ ಲಿಂಕರ್ನರವರು ನಕ್ಕು, ಗುಮಾಸ್ತನನ್ನು ಕುರಿತು, "ಅಯ್ಯಾ, ನಿನ್ನ ಕಂತೆಯ ಬರಹವನ್ನು ಓದಬೇಕಾದರೆ ನನ್ನ ಆಯುಸ್ಸು ಸಾಲದು. ಅಶ್ವಹೃದಯವನ್ನು ಬಲ್ಲವನು ಅಶ್ವಪರೀಕ್ಷೆಯಾದ ಮೇಲೆ ಮುಖ್ಯ ಗುಣಗಳನ್ನು ತಿಳಿಸುವನಲ್ಲದೆ ಅದರ ರೋಮಕೂಪಗಳನ್ನು ಎಣಿಸುವುದು ತರವೇ" ಎಂದು ಹೇಳಿಕಳುಹಿಸಿದರು. ಕೆಲಸಗಳು ದಿನೇ ದಿನೇ ಹೆಚ್ಚುತ್ತಿರುವ ಈ ಕಾಲದಲ್ಲಿ ಸಂಕ್ಷೇಪವು ವಿಶೇಷ ಫಲದಾಯಕವಾದುದು. ಒಂದು ಗಾದೆಯು ಒಂದು ಪುಸ್ತಕದ ಸಾರಾಂಶವಾಗುತ್ತದೆ. ಆದುದರಿಂದ ಸಾರಾಂಶವನ್ನು ತಿಳಿಯುವ ವಾಡಿಕೆಯನ್ನು ತಂದುಕೊಳ್ಳಬೇಕು.

ಹಾಸಿಗೆ ಇದ್ದಷ್ಟು ಕಾಲು ಚಾಚು.

ಮಿತವ್ಯಯವು ಮನುಷ್ಯನ ಗುಣಶೀಲಗಳನ್ನು ಸರಿಪಡಿಸಬಲ್ಲುದು. ಧನಮದದಿಂದಲೇ ಅನೇಕರು ದುರ್ವ್ಯಾಪಾರಗಳಿಗೆ ಕೈಹಾಕುವರು. ಧನಮದದಿಂದಲೇ ಅವರಿಗೆ ಸರ್ವನಾಶವುಂಟಾಗುವುದು. ಧನವು ಹೆಚ್ಚಿದ ಹಾಗೆಲ್ಲಾ ಮಿತವ್ಯಯವು ತಲೆದೋರಿದರೆ, ಆಗ ಮನುಷ್ಯನು ಊರ್ಜಿತಸ್ಥಿತಿಗೆ ಬರಬಹುದು. ಧನಿಕರ ಮಾತು ಹಾಗಿರಲಿ. ಬಲುಮಂದಿ ಬಡ

ವರು ಮುಖ್ಯವಾಗಿ, ಅನೇಕ ದರಿದ್ರ ವಿದ್ಯಾರ್ಥಿಗಳು ಈ ನವ ನಾಗರಕತೆಯ ಲಕ್ಷಣವನ್ನು ನೋಡಿ ಮೋಸಹೋಗುವರು. ಆಗ ಬೆಡಗಿನ ಬಾಡಿಗೆಯ ಬಟ್ಟೆಗಳಿಗೇನು ಕಡಿಮೆ ; ಮೃಷ್ಟಾನ್ನ ಭೋಜನಕ್ಕೇನು ಕಡಿಮೆ. ಹೀಗೆ ವೃಥಾ ನಟನೆಯಿಂದ ಇತ ರರನ್ನು ಮೆಚ್ಚಿಸಿ ಗೌರವವನ್ನು ಪಡೆಯಲೆಳಸುವನ ಬಾಳು ಕಡೆಗೆ ಗೋಳು ; ಪೂರ್ವಾಪರಜ್ಞಾನದಿಂದ ಮಿತವ್ಯಯದ ಲಕ್ಷಣವನ್ನು ತಿಳಿದು ಬಾಳುವುದರಿಂದ ಜನರಿಗೆ ಶ್ರೇಯಸ್ಸುಂ ಟಾಗುತ್ತದೆ. ಪರೋಪಕಾರಕ್ಕೆ ಧನವ್ಯಯ ಮಾಡಬೇಕಾ ದಾಗ ಹಿಮ್ಮೆಟ್ಟುವುದು ಸರಿಯಲ್ಲ. ತಾನೂ ತಿನ್ನದೆ, ಪರ ರಿಗೂ ಕೊಡದೆ, ಕೂಡಿಟ್ಟ ಧನವು ಪರರ ಪಾಲಾಗುವುದು. ಧನವನ್ನು ದುರ್ವ್ಯಾಪಾರಗಳಿಗೆ ವಿನಿಯೋಗಿಸದೆ ಕಾಲೋಚಿತ ವಾಗಿ ಉಪಯೋಗಿಸುವುದು ಮಿತವ್ಯಯದ ಲಕ್ಷಣ. ಅಲೆ ಕ್ಸಾಂಡರ್, ಆಗಸ್‌ಟಸ್, ಲೂಯಿ, ಅವರಂಗಜೇಬು, ನಾಸಿಕ್ ಇವರು ಮಿತವ್ಯಯಿಗಳೆಂಬ ಹೆಸರು ಪಡೆದಿದ್ದಾರೆ.

ಮಿತವ್ಯಯದ ದಂಪತಿಗಳು ಸಿಕ್ಕುವುದು ಕಷ್ಟ. ದಂಪ ತಿಗಳಿಬ್ಬರೂ ಮಿತವ್ಯಯದ ಗುಟ್ಟನ್ನು ತಿಳಿದರೆ, ಸಂಸಾರಸಾ ಗರವನ್ನು ಸರಾಗವಾಗಿ ದಾಟಬಹುದು. ಕಾಬೆಟ್ ಎಂಬ ಆಂಗ್ಲೇಯನೂ ಆತನ ಪತ್ನಿಯೂ ಮಿತವ್ಯಯಗಳಲ್ಲಿ ಅಗ್ರ ಗಣ್ಯರು. "ಕಾಬೆಟ್" ಎಂಬುವನು ತನ್ನ ಭಾವಿ ಪತ್ನಿಯನ್ನು ೧೩ ನೆಯ ವಯಸ್ಸಿನಲ್ಲಿಯೇ ಕಂಡು ಆಕೆಯನ್ನೇ ಮದುವೆಯಾ ಗಬೇಕೆಂದು ಬಯಸಿ, ಆಕೆಯ ಬಡತನವನ್ನು ನೀಗಲು ೧೫೦ ಸವರ್ಣಗಳನ್ನು ಕಳುಹಿಸಿಕೊಟ್ಟನು. ದೈವಯೋಗದಿಂದ ವಿವಾಹವು ನಡೆದಾಗ, ಆಕೆಯು ಹಿಂದೆ "ಕಾಬೆಟ್" ನು ತನಗೆ ಕೊಟ್ಟಿದ್ದ ಹಣವನ್ನು ಹಿಂದಕ್ಕೆ ಕೊಟ್ಟಳಂತೆ. ಇಂತಹ

ದಂಪತಿಗಳಿಂದ ಸಂಸಾರವು ಮುಂದುವರಿವುದರಲ್ಲಿ ಸಂಶಯ ವಿಲ್ಲ.

ಜ್ಞಾನಾರ್ಜನೆಗಾಗಿ ತವಕಪಡು.

ವಿದ್ಯಾಧಿದೇವತೆಯಾದ ಶಾರದೆಗೂ, ವಿಘ್ನನಾಯಕ ನಾದ ಗಣಪತಿಗೂ ಇನ್ನೂ ತಿಳಿಯದಿರುವ ವಿಷಯಗಳು ಅನೇಕ ವಾಗಿವೆಯೆಂದು ಪುರಾಣಪ್ರಸಿದ್ಧವು. ಹೀಗಿರುವಾಗ ಸಾಮಾನ್ಯನಾದ ನರನು ಎಂದಿಗೂ ತಾನು ಪ್ರವೀಣನೆಂಬ ಹೆಮ್ಮೆಯಿಂದ ಮೆರೆಯಬಾರದು. ಹಾಗೆ ಮೆರೆಯುವವನು ಮುಗ್ಗುರಿಸಿ ಬೀಳದಿರಲಾರನು. ಆದರೆ ಜನರು ಜ್ಞಾನಾರ್ಜನೆಗಾಗಿ ತವಕಪಡುತ್ತಿರಬೇಕು. ಎಷ್ಟೋ ಮಂದಿ ತಾಯಿತಂದೆಗಳು ತಮಗೆ ಬಾರದ ವಿದ್ಯೆಯು ತಮ್ಮ ಮಕ್ಕಳಿಗೇತಕ್ಕೆಂದು ಭಾವಿಸಿ, ತಮ್ಮ ಸಂತಾನವನ್ನು ತಮಗಿಂತ ಕೀಳಾದ ಸ್ಥಿತಿಗೆ ತಂದುಬಿಡುವರು. ಹಳ್ಳಿಗಾಡುಗಳಲ್ಲಿ ಅನೇಕ ಮಕ್ಕಳು ಇಂತಹ ಅಸೂಯಾಪರರಾದ ತಾಯಿತಂದೆಗಳ ವಶರಾಗಿ ಹಾಳಾಗುತ್ತಿರುವರು. ಅನೇಕ ಉಪಾಧ್ಯಾಯರೂ ಸಹ ಈ ರೀತಿಯಾದ ಅಹಂಭಾವಕ್ಕೊಳಗಾಗಿ ತಮ್ಮ ಶಿಷ್ಯರಿಗೆ ಸರಿಯಾದ ಶಿಕ್ಷಣವನ್ನು ಕೊಡದೆ, ಅವರನ್ನು ಬುದ್ಧಿಕುಶಲತೆಗಳಲ್ಲಿ ತಮಗಿಂತಲೂ ಮುಂದುವರಿಯಗೊಡರು. ಆದರೆ ಮತ್ತಗಜದ ಓಟಕ್ಕೆ ನಾಯ ಬಗುಳು ಅಡ್ಡವಲ್ಲ. ಜ್ಞಾನಾರ್ಜನೆಗಾಗಿ ಆತುರಪಡುವ ಮಕ್ಕಳು ಇಂತಹ ತಾಯಿತಂದೆಗಳ, ಗುರುಹಿರಿಯರ ಅಸೂಯೆಯ ಕಟ್ಟಿಗೆ ಸಿಕ್ಕಲಾರರು.

ಯಾರೇ ಆಗಲಿ ಪ್ರಪಂಚದಲ್ಲಿ ತಾನಿರುವವರೆಗೂ ತಿಳಿಯಬೇಕಾದ ವಿಷಯಗಳು ಲೆಕ್ಕವಿಲ್ಲದಷ್ಟಿವೆಯೆಂದರಿತವನಾಗಿ

ಅಂತಹ ವಿಷಯುಗಳನ್ನು ನಾನಾ ಮುಖದಿಂದ ತಿಳಿಯಲು ಪ್ರಯತ್ನಪಡಬೇಕು. ಜ್ಞಾನವಿಲ್ಲದ ಮನುಜನು ಒಂದು ಕಲ್ಲ ಕಂಬ ; ತಿಳಿಯದಿದ್ದರೂ ತಿಳಿದವನಂತೆ ನಟಿಸಬಾರದು. ಈ ನಟನೆಯು ಜ್ಞಾನಾರ್ಜನೆಗೆ ದೊಡ್ಡ ತಡೆ. ತನ್ನ ದಡ್ಡತನವನ್ನು ಒಪ್ಪಿಕೊಳ್ಳುವವನು ಬುದ್ಧಿವಂತನಾಗಲು ಪ್ರಯತ್ನಪಡುವನು. ಇಲ್ಲದ ವಿಷಯುವನ್ನು ವಾದಿಸಿ ಬಲ್ಲವನಂತೆ ಮೆರೆಯುವವನ ಬಾಳು ಎಂದಾದರೂ ಹೊರಬೀಳುವುದು. ಆಗ ಆತನು ತನ್ನ ನಟನೆಗೆ ತಕ್ಕ ಮರ್ಯಾದೆಯನ್ನು ಪಡೆದು ಸರಿಜನರಿದಿರಿಗೆ ನಿಲ್ಲದಂತಾಗುವುದು.

ಜ್ಞಾನಾರ್ಜನೆಗೆ ಪುಸ್ತಕಗಳನ್ನೋದುವುದು ವಿಶೇಷ ಸಹಕಾರಿಯಾಗಿದೆ. ವರ್ತಮಾನಪತ್ರಿಕೆಗಳನ್ನೋದಿ ಪ್ರಾಪಂಚಿಕ ಜ್ಞಾನವನ್ನು ಪಡೆಯಬೇಕಾಗಿದೆ. ಅನೇಕ ರಣಧೀರರು ಯುದ್ಧಾಂಗಣದಲ್ಲಿ ಪುಸ್ತಕಗಳನ್ನೋದುತ್ತಿದ್ದರು. ಉನ್ನತ ಪದವೀಧರರಾದ ಮಹನೀಯರನೇಕರಿಗೆ ಪುಸ್ತಕವೇ ಪ್ರಾಣವಾಗಿದ್ದಿತು. ಪವಿತ್ರವಾದ ರಾಮಾಯಣ, ಮಹಾಭಾರತಗಳ ಪಾರಾಯಣದಿಂದ ಭಾರತವರ್ಷದ ಆರ್ಯಧರ್ಮವು ಇನ್ನೂ ಅಲ್ಲಲ್ಲಿ ಪ್ರಾಣವಿಟ್ಟುಕೊಂಡಿದೆ. ಜನರ ನಡೆನುಡಿಗಳೂ, ನ್ಯಾಯನೀತಿಗಳೂ ಈ ಇತಿಹಾಸಗಳನ್ನೋದುವುದರಿಂದ ಸರಿಪಡುವವು. ಹೀಗೆಯೇ, ಜ್ಞಾನವನ್ನು ಪಡೆಯಬೇಕೆಂದಿರುವವನು ಗದ್ಯಕಾವ್ಯ, ಪದ್ಯಕಾವ್ಯ, ಪ್ರಬಂಧ, ನಾಟಕ ಇತ್ಯಾದಿ ಗ್ರಂಥಗಳನ್ನು ವಿರಾಮಕಾಲಗಳಲ್ಲೋದುತ್ತ ಜ್ಞಾನವನ್ನು ಪಡೆದು, ತನ್ನ ದೋಷಗಳನ್ನು ಪರಿಹರಿಸಿಕೊಳ್ಳಬೇಕು.

ಓದಿದುದನ್ನು ಪರಿಶೀಲಿಸಿ ತಿಳಿದುಕೊಳ್ಳಬೇಕು. ಸುಮ್ಮನೆ ಕುಳಿತು ಪುಸ್ತಕಗಳನ್ನೇ ಓದುವುದರಲ್ಲಿ ಕಾಲವನ್ನು ಕಳೆದರೆ,

ಆತನನ್ನು "ಪುಸ್ತಕ ಪಿಶಾಚ" ವೆಂದು ಕರೆಯಬೇಕಾಗುವುದು. ಈ ಪ್ರಪಂಚದಲ್ಲಿ ನಾನಾಬಗೆಯ ಜನರು ಕಾಣಬರುವರು. ನೋಡಲು ಬಂದವರಿಗೆ ಗೌರವವನ್ನು ಕೊಡದ ಅಧಿಕಾರಿಗಳೂ, ಮಾಡಿದುದನ್ನು ಮರೆಯಲ್ಲಿ ಸುಂಗುವ ಸುದತಿಯರೂ, ಹೇಳಿದುದನ್ನು ಮರೆಯುವ ಅಲಂಕಾರ ವಿದ್ಯಾರ್ಥಿಗಳೂ ಇರುವರು. ಆದರೆ, ಇವರಿಗೆ ಪ್ರತಿರೂಪವಾಗಿ ಮಾನವ ಜಾತಿಯನ್ನೆಲ್ಲಾ ಸರ್ವಸಮದೃಷ್ಟಿಯಿಂದ ನೋಡುವ ಸದಭಿಮಾನಿಗಳನ್ನೂ, ಪತಿಯ ಮತ್ತು ಮಕ್ಕಳ ಸೇವೆಯಲ್ಲಿ ಆತ್ಮಸುಖವನ್ನು ಮರೆಯುವ ಲಲನಾಮಣಿಯರನ್ನೂ, ಓದಿದ ಕ್ಷಣ ವಿಷಯವನ್ನು ಗ್ರಹಿಸುವ ಮೇಧಾವಿಗಳನ್ನೂ ನೋಡಬಹುದು. ಇಂತಹ ದೇವಾಂಶಪುರುಷರನ್ನು ನೋಡಿ ಬುದ್ಧಿವಿಹೀನನಾದವನು, ತನ್ನ ಕೆಟ್ಟ ನಡೆನುಡಿಗಳನ್ನು ತಿದ್ದಿಕೊಳ್ಳಬಹುದು. ಓದುವುದಕ್ಕಿಂತಲೂ ಪರಿಶೀಲನೆಯು ಮನುಷ್ಯನ ಜ್ಞಾನವನ್ನು ಬಲುಬೇಗನೆ ವಿಸ್ತರಿಸುತ್ತದೆ. ಇದರಿಂದ ಮಾನವನಿಗೆ ತನ್ನ ಅವಸ್ಥೆಯು ತಿಳಿದು "ತಾನು ವಿಸ್ತಾರವಾದೀ ಭುವಿಯಲ್ಲಿ ಅಣುಮಾತ್ರದವ" ನೆಂಬ ಜ್ಞಾನೋದಯವುಂಟಾಗಿ ಅಹಂಕಾರವು ತೊಲಗುವುದು. ತನ್ನನ್ನು ತಾನರಿಯುವುದರಿಂದ ಮುಕ್ತಿಯುಂಟಾಗುವುದು.

ಒಳ್ಳೆಯ ಸ್ನೇಹವನ್ನು ಸಂಪಾದಿಸು.

ಎನಿತು ಜನಮಿರ್ದೊಡೇಂ ತ ।
ನ್ನನುವರಿತವನೊಬ್ಬನಿಲ್ಲದಿರ್ದೊಡೆ ಶೂನ್ಯಂ ॥
ಘನತರಚಿಕಿತ್ಸೆಯಿಲ್ಲದೊ ।
ಡೆನಿತೌಷಧಮಿರ್ದೊಡೇನು ಸುಜನೋತ್ತಂಸಾ ॥

ಎಂಬುದಾಗಿ ಕವಿಯೋರ್ವನು ನುಡಿದಿರುವನು.

ಹಿಂದೆ ಹೇಳಿದ ಅಭಿವೃದ್ಧಿರತ್ನಗಳು ಎಲ್ಲಿ ದೊರೆಯುವುವೆಂದು ವಾಚಕರಿಗೆ ಭ್ರಾಂತಿಯುಂಟಾಗಬಹುದು. ಅವು ವ್ಯಾಪಾರಗಾರರಲ್ಲಿ ಸಿಕ್ಕುವ ಆಭರಣಯೋಗ್ಯವಾದ ರತ್ನಗಳಲ್ಲ ; ನೀತಿಯೇ ನಂದನವನವೆಂದು ಹಿಂದೆ ಹೇಳಿದೆ. ಈ ನಂದನವನದಲ್ಲಿ ಸರ್ವ ಋತುಗಳಲ್ಲಿಯೂ ಫಲಪುಷ್ಪಭರಿತವಾದ ನಾನಾ ವೃಕ್ಷರಾಶಿಗಳಿರುವುವೆಂದು ಹೇಳಿರುವುದನ್ನು ಈಗ ಜ್ಞಾಪಿಸಿಕೊಳ್ಳಿರಿ. ಈ ವೃಕ್ಷಗಳು ಆತ್ಮಸ್ನೇಹಿತರಂತೆ ಅಭಿವೃದ್ಧಿರತ್ನಗಳೆಂಬ ವಿವಿಧಫಲಮಂಜರಿಗಳನ್ನೀಯುವುವು. ಒಂದೊಂದು ವೃಕ್ಷವೂ ಒಂದೊಂದು ಬಗೆಯ ರತ್ನವನ್ನು ಕೊಡಬಲ್ಲದು.

ಈ ಪ್ರಪಂಚದಲ್ಲಿ ಯಾರೂ ಸರ್ವಗುಣಸಂಪನ್ನರಲ್ಲ. ಈ ಪುಸ್ತಕದಲ್ಲಿ ಹೇಳಿರುವ ಒಂದೊಂದು ಗುಣವೂ ಒಬ್ಬೊಬ್ಬನಲ್ಲಿ ಕಾಣಬಹುದು. ಆದುದರಿಂದ ಅಭಿವೃದ್ಧಿಗೆ ಬರಬೇಕೆಂದಿರುವವನು ನೀತಿಯೆಂಬ ನಂದನವನದಲ್ಲಿ ವಿಹರಿಸುವುದರಲ್ಲಿಯೇ ಕಾಲವನ್ನು ಕಳೆಯದೆ, ತನಗೆ ಬೇಕಾದ ರತ್ನಗಳನ್ನು ಸಾಧಿಸಿ ಪಡೆಯಬೇಕು. "ಬರಿಯ ಮಾತಿಗೆ ಮಾವಿನಕಾಯಿ ಬೀಳುವುದಿಲ್ಲ" ವೆಂದು ಹಿರಿಯರು ಹೇಳುವರು. ಪ್ರಪಂಚದಲ್ಲಿ ಮಾನವನಿಗೆ ಸಾವಿರಾರು ಬಂಧುಗಳಿರಬಹುದು. ಲೆಕ್ಕವಿಲ್ಲದಷ್ಟು ಸ್ನೇಹಿತರಿರಬಹುದು. ಆದರೆ ತನ್ನನ್ನು ಅಭಿವೃದ್ಧಿಗೆ ತರುವ ಒಬ್ಬನಾದರೂ ಇಲ್ಲದಿದ್ದರೆ ಪ್ರಯೋಜನವೇನು? ನೀರೂ ನೆರಳೂ ಇಲ್ಲದ ಮರುಭೂಮಿಯಂತೆ ಇದರಿಂದ ಕಿಂಚಿತ್ತಾದರೂ ಪ್ರಯೋಜನವಿಲ್ಲ. ಬರಿಯ ಔಷಧಿಗಳ ಗಂಟನ್ನು ಇರಿಸಿಕೊಂಡಮಾತ್ರಕ್ಕೆ ವೈದ್ಯಸಿಂದ ರೋಗ ಪರಿಹಾರವಾಗಲಾರದು. ಔಷಧಿಗೆ ತಕ್ಕ ಚಿಕಿತ್ಸೆಯಿರಬೇಕು. ಅದರಂತೆ,

ಬಂಧುಮಿತ್ರರಲ್ಲಿ ತನ್ನ ಮನೋಭಾವವನ್ನು ತಿಳಿದು ನಡೆಯುವ ಜನರಿರಬೇಕು. ಆದುದರಿಂದ ಈ ಪುಸ್ತಕವನ್ನೋದುವವರು ಇದರಲ್ಲಿರುವ ಗುಣಗಳು ಕಂಡುಬರುವ ಸ್ನೇಹಿತನನ್ನು ಸಂಪಾದಿಸಿಕೊಳ್ಳಬೇಕು.

ಎಲ್ಲಾ ದೋಷಗಳಿಗಿಂತಲೂ ಸಹವಾಸದೋಷವು ಬಲು ಕೆಟ್ಟದು. ಸಹವಾಸದೋಷದಿಂದ ಮನುಷ್ಯನ ಸ್ವಭಾವವೇ ಬೇರೆಯಾಗುವುದು. ಷೇಕ್ಸ್‌ಪಿಯರ್ ಕವಿಯು ಹೇಳಿರುವಂತೆ,

Friends thou hast and their adoption tried,
Grapple them to thy soul with hoops of steel ;
Dull not thy palm with entertainment
Of each new hatched unfledged comrade.

ಒಳ್ಳೆಯ ಸ್ನೇಹಿತನನ್ನು ಸಂಪಾದಿಸುವುದು ಕಷ್ಟತರವಾದುದು. ಸ್ನೇಹಿತನೆಂದು ತನ್ನ ರಹಸ್ಯವನ್ನು ಆತನಲ್ಲಿ ಹೇಳುವುದು ರೂಢಿಯಾಗಿದೆ. ಇದರಿಂದ ಮಾನಹಾನಿ, ಪ್ರಾಣಹಾನಿಗಳುಂಟಾಗುತ್ತದೆ. ಸ್ನೇಹಿತನೆಂಬುವನು ಸಾಮಾನ್ಯನಲ್ಲ.

ದುರಿತದ ಕೃತ್ಯದಿಂಪೆ ತೊಲಗಲ್ ಹಿತಕಾರ್ಯದೆ ಯೋಚಿಸಲ್ ಗುಣೋ |
ತ್ಕರವ ವಿಕಾಸಿಸಲ್ ಮರೆಸತಕ್ಕುದ ತಾಂ ಮರೆಸಲ್ ವಿಪತ್ತಿನೊಳ್ ||
ಪೊರೆಯಲುಮೀಯಲುಂ ನೆರೆದಿರ್ದಪನಾವನಾಮಹಾ | ಪುರುಷನೆ ಮಿತ್ರ
ನೆಂದುಸಿರ್ದಪರ್ ನಯಶಾಸ್ತ್ರವ ಬಲ್ಲ ಸಜ್ಜನರ್ ||

(ಕನ್ನಡ ಭರ್ತೃಹರಿ)

ದಾರಿ ತಪ್ಪಿದಾಗ ಬುದ್ಧಿ ಹೇಳುವವನೂ ತನ್ನ ಕೆಲಸದಲ್ಲಿ ಸಹಾಯ ಮಾಡುವವನೂ, ಆಪತ್ತಿನಲ್ಲಿ ಬೆಂಬಲವಾಗಿ ನಿಲ್ಲುವವನೂ ಯಾವನೋ ಆತನೇ ಆಪ್ತ ಸ್ನೇಹಿತನು. ಇಂತಹ ಸ್ನೇಹಿತರನ್ನು ಒದಗಿಸಿಕೊಂಡರೆ ಪುಣ್ಯೋದಯವೇ ಸರಿ.

ಆದುದರಿಂದ ಅಭಿವೃದ್ಧಿಗೆ ಬರಬೇಕೆಂದಿರುವ ಮಾನವನು ಮೊದಲು ಆಪ್ತಸ್ನೇಹಿತನೊಡಗೂಡಿರಬೇಕು. ಅತಿ ಸ್ನೇಹವು ಹಾನಿಕರವಾದುದು. ಉತ್ತಮ ಸ್ನೇಹಿತನು ಸಮಯಕ್ಕೊದಗುವನು. ಆತನ ಸಹವಾಸವು ತನ್ನ ದುಃಖವನ್ನು ಪರಿಹರಿಸುವುದು. ಆದುದರಿಂದ ಮನೋವಾಕ್ಕಾಯಗಳಲ್ಲಿ ಯಾರು ಪರಿಶುದ್ಧರೋ, ತನ್ನ ಮನಸ್ಸಿನ ಭಾವವನ್ನರಿತು ಯಾರು ನಡೆಯಬಲ್ಲರೋ ಅಂತಹ ಮಹನೀಯರ ಸ್ನೇಹದಿಂದ ಮಹೋಪಕಾರವಾಗುವುದು. ಆಗ ಈ ಅಭಿವೃದ್ಧಿರತ್ನಾಕರದಲ್ಲಿ ದೊರೆಯುವ ರತ್ನಗಳನ್ನು ತಾನೂ ಧರಿಸಿ ಮಾನವನು ಪರಮಪಾವನನಾಗಬಹುದು.

---

## TESTIMONIALS.

---

DEAR MR. NARASIMHAIYA,

It is really very kind of you to have presented me with a copy of your new book "ABHIVRUDHI RATNAKARA." It is a splendid book for our young men. There are several books of the kind in English, but not in Kannada so far as I know. This will serve as an excellent text-book of **Moral Lessons** for III Form. I wish it were so prescribed.

It deserves every encouragement at the hands of the Education Department and the Kannada public. Hoping to see it introduced as a text-book soon and with best wishes to you,

I am,
Yours sincerely,
(Sd.) SUBRAMANYA IYER,
*Registrar, University of Mysore.*

MYSORE,
*27th Aug 1925.*

---

DEAR MR. NARASIMHIAH,

I have read your book "ABHIVRUDHI RATNAKARA" which you kindly gave me the other day.

It is an excellent little book which inculcates high moral truths in an intelligible style. What makes the book interesting and informing is the variety of slokas culles from various sources and quoted in appropriate places to illustrate the truths. This is a fine way of bringing home to the mind the value of virtue.

From this point of view, your book will make a very good text-book in High Schools and I hope you will succeed in getting it introduced into High Schools.

Yours sincerely,
(Sd.) B. PUTTAIYA,
*Superintendent*,
Govt. Press & Stationery.

CHAMARAJPET,
*Bangalore, 22-8-1925.*

---

DEAR SIR,

Pray accept my best thanks for your kindness in sending me your interesting and well written "ABHIVRUDDHI-RATNAKARA."

I sincerely hope that the little book will meet with success that it merits.

LONDON.
*30th Sept. 1925.*

Yours very faithfull,
(Sd.) L. D. BARNETT,

---

ನೀವು ಪ್ರೀತಿಪೂರ್ವಕವಾಗಿ ಕಳುಹಿಸಿಕೊಟ್ಟ "ಅಭಿವೃದ್ಧಿರತ್ನಾಕರ"
ದ ಪ್ರತಿಯು ತಲಪಿತು. ಯುವಕ ಯುವತಿಯರ ಒಳ್ಳೆಯ ನಡತೆಯನ್ನು ಅಭಿ
ವೃದ್ಧಿಪಡಿಸುವುದಕ್ಕೆ ನಿಮ್ಮ ಗ್ರಂಥವು ಮೇಲ್ತರದ ಒಂದು ಸಾಧನವಾಗಿರುವುದು.
ಮುದ್ರಣದ ಕ್ರಮವೂ ಕಾಗದವೂ ಸಮರ್ಪಕವಾಗಿರುವುದು. ಶೈಲಿಯು ಸರಳವಾ
ಗಿಯೂ ಇಂಪಾಗಿಯೂ ಇರುವುದಲ್ಲದೆ ನೀವು ಅಲ್ಲಲ್ಲಿ ಕೊಟ್ಟಿರುವ ಅನು[illegible]
ಗಳು ಸಂದರ್ಭೋಚಿತವಾಗಿಯೂ ಸಂಕ್ಷೇಪವಾಗಿಯೂ ಇರುವುವು.

ಅಭಿವೃದ್ಧಿ ರತ್ನಾಕರಕ್ಕೆ ತಕ್ಕ ಪ್ರೋತ್ಸಾಹವು ದೊರೆಯುವುದೆಂದು ನಂಬಿರುವೆನು.

ಬಿ. ಕೃಷ್ಣಪ್ಪ,
ಸಂಪಾದಕ, ಕರ್ನಾಟಕ ಗ್ರಂಥಮಾಲೆ.